# ಸಿದ್ಧಗಂಗಾ

ಂಪುಟ–28 ಸಂಚಿಕೆ–7 ಜುಲೈ–1992.

ವಿದ್ಯಾರ್ಥಿಗಳು ಮಲಗಿ, ಬಗ್ಗಿ, ವಕ್ರವಕ್ರವಾಗಿ ಕುಳಿತು ವ್ಯಾಸಂಗವನ್ನು ೂಡಬಾರದು. ಇದು ಯೋಗ್ಯವಾದ ಮಾರ್ಗವಲ್ಲ. ಮನಸ್ಸು ಹದಕ್ಕೆ ಬರುವುದು, ಏಕಾಗ್ರತೆ ಸಾಧಿಸುವುದು ವಕ್ರವಾಗಿ ಕುಳಿತರೆ ಬಹಳ ಷ್ಟವಾಗುವುದು. ಶಿರಸ್ಸು, ಕಂಠ, ಶರೀರ ಮೂರೂ ಸಮನಾಗಿರುವಂತೆ ೂಡಿ, ಮನಸ್ಸಿಟ್ಟು ವ್ಯಾಸಂಗ ಮಾಡಬೇಕು.

ಪ್ರಾರ್ಥನೆ ಮಾಡುವಾಗಲೂ ಇದೇ ಕ್ರಮ ಅನುಸರಿಸುವುದು ಉತ್ತಮ. ುನಸ್ಸು ನಾನಾ ಕಡೆ ಹರಿಯುತ್ತದೆ. ಅಂಥ ಹರಿವ ಮನಸ್ಸು ಒಂದು ಕಡೆ ಲ್ಲುವಂತೆ ಮಾಡುವುದಕ್ಕೆ ಯೋಗ್ಯ ರೀತಿಯ ಆಸನ ಅತ್ಯಗತ್ಯ. ಇದು ್ರಾರಂಭದಲ್ಲಿ ಕಷ್ಟ, ಆದರೆ ಅಭ್ಯಾಸದಿಂದ ಯಾವುದು ಕಷ್ಟವಾಗಲಾರದು.

—ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
...ಶಾಲೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

 

# ಜಾಹೀರಾತುದಾರರಲ್ಲಿ ವಿನಂತಿ



ಮಾನ್ಯರೆ

ಶ್ರೀ ಸಿದ್ಧಗಂಗಾ ನಾಡಿನ ಪುಣ್ಯಕ್ಷೇತ್ರ. ತ್ರಿವಿಧ ದಾಸೋಹಕ್ಕೆ ಹೆಸರಾಗಿದೆ. ಪರಮಪೂಜ್ಯ **ಶ್ರೀ ಶ್ರೀ** ಶಿವಕುಮಾರ ಸ್ವಾಮಿಗಳವರ ಸತ್ಯ ಶುದ್ಧ ಕಾಯಕದ ಫಲವಾಗಿ ಬೃಹತ್ತಾಗಿ ಸೇವಾಕ್ಷೇತ್ರವೆಂದು ಜನಜನಿತವಾಗಿದೆ. ಶಿಕ್ಷಣಕ್ಷೇತ್ರದಲ್ಲಿ ಕ್ರಾಂತಿಯನ್ನೇ ನಡೆಸಿದೆ. ನೂರು ಶಿಕ್ಷಣ ಸಂಸ್ಥೆಗಳನ್ನು ನಡೆಸುವುದರಜೊತೆಗೆ ಐದು ಸಾವಿರಕ್ಕೂ ಹೆಚ್ಚು ದೀನ-ದಲಿತ ಬಡಮಕ್ಕಳಿಗೆ ಜಾತಿ-ಮತ ಬೇಧವನ್ನೆಣಿಸದೆ ಆಶ್ರಯ ನೀಡಿ ಅವರಬಾಳಿಗೆ ಆಶಾಕಿರಣವಾಗಿದೆ. ಶ್ರೀಮಠದಿಂದ "**ಸಿದ್ಧಗಂಗಾ**" ಮಾಸಪತ್ರಿಕೆ ಪ್ರಕಟವಾಗುತ್ತಿರುವುದನ್ನು ತಾವು ಗಮನಿಸಿದ್ದೀರೆಂದು ಭಾವಿಸಿದ್ದೇವೆ. 28 ವರ್ಷಗಳಿಂದ ನಡೆದು ಬರುತ್ತಿರುವ ಈ ಪತ್ರಿಕೆ ವಿಚಾರಪೂರ್ಣ ಲೇಖನಗಳಿಂದ ಪ್ರಕಟವಾಗುತ್ತಿದೆ. ಕರ್ನಾಟಕದ ಎಲ್ಲ ಜಿಲ್ಲೆಗಳಿಗೂ ಪತ್ರಿಕೆ ಪ್ರಸಾರವಾಗುತ್ತಿದೆ. ಪತ್ರಿಕೆಯ ಬೆಳವಣಿಗೆಯಲ್ಲಿ ತಮ್ಮಂತಹ ಮಹನೀಯರು ಜಾಹೀರಾತನ್ನು ನೀಡುವುದರ ಮೂಲಕ ಸಹಕರಿಸುತ್ತ ಬಂದಿದ್ದಾರೆ. ಜಾಹೀರಾತು ನೀಡುವುದೂ ಸೇವೆಯೆಂದೇ ಭಾವಿಸಿದ್ದಾರೆ. ತಾವು ದಯಮಾಡಿ "**ಸಿದ್ಧಗಂಗಾ**" ಮಾಸಪತ್ರಿಕೆಗೆ ತಮ್ಮ ಉದ್ಯಮದ ಜಾಹೀರಾತನ್ನು ನೀಡಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇನೆ.

**ಕಾರ್ಯದರ್ಶಿ,**

**ಜಾಹೀರಾತು ವಿಭಾಗ.**

ಪತ್ರಿಕೆಯ ಆಕಾರ 1/8 ಡೆಮ್ಮಿ. ಭಾಷೆ : ಕನ್ನಡ. ಪುಟಗಳು-50 ಹೊದಿಕೆ ಆರ್ಟ್ ತ್ರಿವರ್ಣ. ಪಠ್ಯಭಾಗ ಹಾಲು ಕಾಗದ. ಮುದ್ರಣ ಪ್ರತಿಗಳು 5000.

ತಾಂತ್ರಿಕ ವಿವರಗಳು

1 ರಕ್ಷಾ ಕವಚ 4 ನೆಯ ಪುಟ....1000
2 ರಕ್ಷಾಕವಚ 2 ನೆ ಪುಟ ....750/-
3 ರಕ್ಷಾಕವಚ 3ನೆಯ ಪುಟ ....750/-
4 ಒಳಗಿನ ಪೂರ್ಣ ಪುಟಕ್ಕೆ ....300/-
5 ಒಳಗಿನ ಅರ್ಧ ಪುಟಕ್ಕೆ ....200/-
6 ಒಳಗಿನ ಕಾಲು ಪುಟಕ್ಕೆ ....100/-

# ಸಿದ್ಧಗಂಗಾ

ಸಂಪುಟ - 28. ಸಂಚಿಕೆ - 7. ಜುಲೈ - 1992.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ರಾಮನಾಥನು ನೀನೆ ಕೂಡಲಸಂಗನು ನೀನೆ
ಚನ್ನ ಕೂಡಲಸಂಗ ನೀನಯ್ಯ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಚನ್ನಮಲ್ಲನು ನೀನೆ ಕಪಿಲಸಿದ್ಧನು ನೀನೆ
ಗುರು ಗುಹೇಶ್ವರಲಿಂಗ ನೀನಯ್ಯ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಸದ್ಯೋಜಾತನು ನೀನೆ ಉರಿಲಿಂಗ ದೇವನೀ
ಮಹಾಲಿಂಗಗುರು ಶಿವಸಿದ್ಧ ನೀನೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡ ‡‡ ‡‡

ಹೆಚ್. ವಿ. ವೀರಭದ್ರಯ್ಯ.

## ಶ್ರೀವಾಣಿ



### ಪೊರಕೆ—ಫೋಟೋ

ಒಮ್ಮೆ ಹೀಗಾಯಿತು. ನಮ್ಮ ಕಾರ್ಯಾಲಯಕ್ಕೆ ಬೆಳಗ್ಗೆ ಆರುಘಂಟೆಗೇ ಬರುವ ಅಭ್ಯಾಸ ನನ್ನದು. ಆಫೀಸಿನ ಪರಿಚಾರಕ ನಾನು ಬರುವುದರೊಳಗೆ ಕಸಗುಡಿಸಿ ಸ್ವಚ್ಛವಾಗಿ ಮನಸ್ಸಿಗೆ ಹರ್ಷವಾಗುವಂತೆ ಎಲ್ಲವನ್ನೂ ಒಪ್ಪವಾಗಿಟ್ಟಿರುವ ವ್ಯವಸ್ಥೆಯಿದೆ. ಆ ಹುಡುಗ ಮುಗ್ಧ, ಭಯಸ್ಥ. ಎಂದೂ ತಪ್ಪುತ್ತಿರಲಿಲ್ಲ. ಎಲ್ಲವನ್ನು ಎಚ್ಚರಿಕೆಯಿಂದಲೇ ನೋಡಿಕೊಳ್ಳುತ್ತಿದ್ದ. ಗಡಿಯಾರ ನಡೆಯುತ್ತಿದೆಯೇ ಇಲ್ಲವೆ? ಭಕ್ತಾದಿಗಳು ಬಂದು ಕೇಳಿದಾಗ ಕೊಡಲು ಟೀ ಇದೆಯೇ ಇಲ್ಲವೆ? ಮ್ಯಾನೇಜರ್ ಕೊಟ್ಟಕಾಗದ ಪತ್ರಗಳನ್ನು ಮೇಜಿನ ಮೇಲೆ ಇರಿಸಿದ್ದೇನೆಯೇ? ಮರೆತ್ತಿದ್ದೇನೆಯೇ? ಆಫೀಸಿನ ಮುಂದೆ 'ಕಾಲೊರೆಸಿ' ಹಾಕಿದ್ದೇನೆಯೇ? ಒಂದೊಂದನ್ನೂ ಜ್ಞಾಪಿಸಿಕೊಂಡು ವ್ಯವಸ್ಥಿತವಾಗಿಟ್ಟಿರುತ್ತಿದ್ದನು. ಅಂತೆಯೇ ಕಸಗುಡಿಸಲು ಬೇಕಾದ ಪೊರಕೆಯುನ್ನು ಕಣ್ಣಿಗೆ ಕಾಣದಂತೆ ಎದುರಿಗೆ ಗುಪ್ತವಾಗಿಡುತ್ತಿದ್ದನು ಒಂದು ದಿನ ನಾನು ಆಫೀಸಿಗೆ ಬಂದಾಗ ಪೊರಕೆಯೇ ಎದುರಿಗೆ ಕಾಣ ಬಂದಿತು. ತಕ್ಷಣವೇ ಕೆಲಸ ಮಾಡುತ್ತಿದ್ದ ಹುಡುಗನನ್ನು ಕರೆದೆ. ಬಂದ. ಬೇಗಹೋಗಿ ಒಬ್ಬ ಫೋಟೊ ಗ್ರಾಫರನನ್ನು ಕರದುಕೊಂಡು ಬರಬೇಕಲ್ಲಾ ಎಂದೆ. ಅವನು ತಡಮಾಡಲೇ ಇಲ್ಲ. ಹೊರಟೇ ಬಿಟ್ಟ ಏಕೆ? ಎಷ್ಟು ಹೊತ್ತಿಗೆ ಕರೆತರಬೇಕೆಂದೂ ಕೇಳಲಿಲ್ಲ. ಕೊಂಚ ಹೆಜ್ಜೆ ಹಾಕಿರಬಹುದು. ಹಿಂದಕ್ಕೆ ಕರೆಸಿದೆ ಅಲ್ಲಿದ್ದ ಇನ್ನೊಬ್ಬ ಸೇವಕನಿಗೆ ಹೇಳಿ. ಹುಡುಗ ಬಂದ ಸುಮ್ಮನೆ ನಿಂತ. ಕೇಳಿದೆ ಫೋಟೋಗ್ರಾಫರನನ್ನು ಕರೆತಂದ ಎಂದು? ಇಲ್ಲ ಹಿಂದಕ್ಕೆ ಹೇಳಿಕಳುಹಿಸಿದಿರಿ ಎಂದ. ಪೊರಕೆಯ ಫೋಟೋ ತೆಗೆಸೋಣ ಎನಿಸಿತು. ಅದಕ್ಕೆ ಹೇಳಿದೆ ಎಂದೆ. ಕಕ್ಕಾ ಬಿಕ್ಕಿಯಾಗಿ ನಿಂತ. ಕೊನೆಗೆ ಪೊರಕೆಯುನ್ನು ಫೋಟಕ್ಕೆ ಕೂರಿಸಿದ್ದಿಯೇನು ಎಂದೆ? ನೋಡಿದ ಪೊರಕೆ ಇರಬೇಕಾದ ಸ್ಥಳದಲ್ಲಿರದೆ ಬಂದವರೆಲ್ಲರಿಗೆ ಕಾಣುವಂತೆ ಇರಿಸಿದ್ದೇನೆಂಬುದನ್ನು ಗುರುತಿಸಿದ. ನಗುಬಂತು. ಅವನು ನಕ್ಕ. ಜೀವನದಲ್ಲಿ ರಸ ನಿಮಿಷಗಳು ಒದಗಿಸುವ ನಗು ಅದೆಷ್ಟೋ. ಆಕಸ್ಮಿಕವಾಗಿ ಸಂಭವಿಸುವ ಅಚಾತುರ್ಯಗಳೂ ನಮಗೆ ಪಾಠ ಕಲಿಸುತ್ತವೆ.

## ಶ್ರೀ ಸಿದ್ಧಲಿಂಗೇಶ್ವರ ವಚನ

ಭಾವಮನಗಳಿಗೆ ಲಿಂಗವಧರಿಸಿ ಕಾಯಕ್ಕೆ ಲಿಂಗವಿಲ್ಲದಿರಬಹುದೇ?
ಎರಡಂಗ ಭಕ್ತರಾಗಿ ಒಂದಂಗ ಭವಿಯಾಗಿಪ್ಪ
ಭ್ರಾಂತರ ಮುಖವ ನೋಡಲಾಗದು.
ತನು ಮನ ಭಾವಗಳಲ್ಲಿ ಲಿಂಗವ ಧರಿಸಿ
ಲಿಂಗತ್ರಯಕ್ಕೆ ಅಂಗತ್ರಯಕ್ಕೆ ಅಗಲಿಕೆಯಿಲ್ಲದೆ ಅಚಲಿತನಾಗಿರ್ದೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

"ವಿಚಾರದಂತೆ ಆಚರಣೆಯಿರಬೇಕು" ಎಂಬುದು ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ಸಾರಸರ್ವಸ್ವವಾಗಿದೆ. ಇದರ ಮೇಲಿಂದ ಕೇವಲ ತಿಳುವಳಿಕೆಯೊಂದೇ ಸಾಲದು. ನಡವಳಿಕೆಯೂ ಬೇಕೆಂಬುದು ಸಿದ್ಧವಾಗುವುದು. ಅಂಗದಮೇಲೆ ಲಿಂಗಧಾರಣ ಮಾಡುವುದೂ ಇದನ್ನೇ ಹೇಳುವುದು. ಅಂತರಂಗದ ಜ್ಞಾನವು ಬಹಿರಂಗದ ಕ್ರಿಯಾರೂಪದಲ್ಲಿ ಪ್ರಕಟವಾದಾಗಲೇ ಆ ಜ್ಞಾನವು ಪೂರ್ಣವಾಗಬಲ್ಲದು. ಕ್ರಿಯಾಮುಖಕ್ಕೆ ಇಳಿಯದ ಜ್ಞಾನವು ಅಜ್ಞಾನವೇ ಆಗುವುದು. "ಎಷ್ಟೋ ಜನರು ಬ್ರಹ್ಮಜ್ಞಾನವುಳ್ಳವರಾಗಿದ್ದರೂ ಬ್ರಹ್ಮವೃತ್ತಿಯಿಲ್ಲದವರಾಗಿರುವರು. ಅಂಥವರು ಕೇವಲ ಅಜ್ಞಾನಿಗಳಲ್ಲ, ಅಜ್ಞಾನಿತಮರಾಗಿರುವರು" ಎಂದು ಅದ್ವೈತ ಸಿದ್ಧಾಂತವನ್ನು ಎತ್ತಿ ಹಿಡಿದು ಪ್ರಚಾರ ಮಾಡಿದ ಶಂಕರಾಚಾರ್ಯರು ಆನಂದ ಲಹರಿಯಲ್ಲಿ ಹೇಳಿದ್ದಾರೆ.

ಕೇವಲ ಶಾಸ್ತ್ರಾಭ್ಯಾಸದ ಪರಿಣಾಮವಾಗಿ ಶಿವನು ಎಲ್ಲ ಕಡೆಗೂ ಇರುವನು, ನನ್ನಲ್ಲಿಯೂ ಇರುವನು ಎಂಬ ಕೇವಲ ತಿಳಿವಳಿಕೆ ಮಾತ್ರದಿಂದ ಯಾವನಿಗೂ ಲಿಂಗಾಂಗಸಾಮರಸ್ಯದ ಅನುಭವವಾಗದು. ಶಿವನೊಡನೆ ತಾನು ಒಂದಾಗಿ ಸಮರಸಾನಂದದ ಅನುಭವವನ್ನು ಮಾಡಿಕೊಳ್ಳಲು ಅಂಗದಮೇಲೆ ಲಿಂಗಧಾರಣಮಾಡಿ ಪೂಜಿಸಲೇಬೇಕಾಗುವುದು. ಶರಣರು ಜ್ಞಾನಕ್ರಿಯಾ ಸಮಸಮುಚ್ಚಯವಾದಿಗಳಾಗಿರುವರು.

ಭಾವಮನಗಳಲ್ಲಿ ಲಿಂಗವಿದ್ದು ಹೊರಗಿನ ಸ್ಥೂಲಕಾಯಕ್ಕೆ ಲಿಂಗವಿಲ್ಲದಿದ್ದರೆ ಆ ಕಾಯ ಭವಿಯಾಗುವುದು. ಒಳಗಿನ ಎರಡಂಗಗಳು ಭಕ್ತರಾಗಿದ್ದು ಹೊರಗಿನಅಂಗ ಭವಿಯಾಗಿದ್ದವರ ಮುಖವನ್ನು ಸಹ ನೋಡಬಾರದು. ಅಂತೆಯೇ ಮೂರು ಶರೀರಗಳು ಲಿಂಗ-ಸಂಬಂಧವುಳ್ಳವಾಗಲೇಬೇಕು. ಕಿರಿಯನಾಗಿದ್ದವನು ಎಷ್ಟು ಹಿರಿಯನಾಗಬಹುದೆಂದುದನ್ನು ಪ್ರತ್ಯಕ್ಷಲಿಂಗಪೂಜೆಯಿಂದಲೇ ಅನುಭವಿಸಬೇಕು. ಇಷ್ಟಲಿಂಗದ ಪೂಜೆಯೆಂದರೆ ಸಮಸ್ತ ಪ್ರಾಣಿಗಳೂ ಸುಖವಾಗಿರುವಂತೆ ವ್ಯವಹರಿಸುವುದೇ ಆಗಿದೆ.

ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪಾ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹಸಂಪಾದಕರು
ಎಂ. ರೇಣುಕಾರಾಧ್ಯ
ಪಿ. ಎಸ್. ಚಂದ್ರಶೇಖರಯ್ಯ
ಬಿ. ವೀರಭದ್ರಯ್ಯ

* * *

ಜಾಹೀರಾತುವಿಭಾಗ
ಸಿ. ಬಿ. ಶಂಕರಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧ
ಮಠದಿಂದ ಪ್ರಕಟವಾಗುತ್ತಿರುವ
ಪತ್ರಿಕೆ. ಶ್ರೀ ಮಠದ ಹಳೆಯ ವಿದ
ಸಂಘದ ಹೆಮ್ಮೆಯ ಸೇವಾ ಪ್ರ
ಮೇಲಾಗಿ ಶ್ರೀ ಮಠದ ಮುಖ
ಪೂಜ್ಯ ಶ್ರೀ ಶ್ರೀ ಡಾ|| ಶಿವಕ
ಮಹಾಸ್ವಾಮಿಗಳವರ ದಿವ್ಯ ಮಾಗ
ನದಲ್ಲಿ ಮುನ್ನಡೆದಿರುವ ಪತ್ರಿಕೆ.
ದಾಸೋಹ ಸೇವಾ ತತ್ಪರತೆಯಿಂದ
ಹಾಕುತ್ತಿದೆ. ಈ ಧ್ಯೇಯ ಸಾಧ
ನಾಡಿನ ಗಣ್ಯ ಲೇಖಕರಿಂದ ಸಾ
ಸಂಸ್ಕೃತಿ, ಧರ್ಮ, ವಿಜ್ಞಾನ,
ಇತಿಹಾಸ, ವೈಚಾರಿಕ, ಚಿಂತನ ಮು
ಲೇಖನಗಳನ್ನು ಸ್ವಾಗತಿಸುತ್ತದೆ. ಅ
ಲೇಖನಗಳನ್ನು ಪಡೆಯಲು ಸ
ಅಂಚೆಸ್ಟಾಂಪುಗಳನ್ನು ಲಗತ್ತಿಸಿರ
ಲೇಖನಗಳಲ್ಲಿ ಸೂಕ್ತ ಬದಲಾವಣೆ
ಕೊಳ್ಳುವ ಅಧಿಕಾರ ಸಂಪಾದಕ
ಅನುವಾದ, ರೂಪಾಂತರ ಲೇಖ
ಮೂಲ ಕೃತಿಕಾರರ ಅನುಮತಿ ಪ
ಬೇಕು. ಸ್ವೀಕೃತ ಲೇಖನಗಳಿಗೆ
ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾ

# ಸಂಪಾದಕೀಯ

## ಬಸವಣ್ಣ ಒಪ್ಪುವಂತೆ ಒಗೆತನವ ಮಾಡುವೆ.

ಅಕ್ಕಮಹಾದೇವಿ ಕಲ್ಯಾಣವನ್ನು ಬಿಟ್ಟು ಶ್ರೀಶೈಲದ ಕದಳಿಗೆ ತೆರಳುವ ಸಂದರ್ಭ. ಅನುಭವ ಮಂಟಪದ ಶರಣ ಶರಣೆಯರೆಲ್ಲ ಅಕ್ಕನನ್ನು ಬೀಳ್ಕೊಡಲು ಸಿದ್ಧರಾಗಿದ್ದಾರೆ. ಎಲ್ಲರ ಹೃನ್ಮನಗಳೂ ಭಾವಭರಿತವಾಗಿವೆ. ಅನುಭವ ಮಂಟಪದಲ್ಲಿ ಅಕ್ಕನೀಡಿದ ಅನುಭವ ಸಂಪತ್ತು ಅನುಪಮವಾದುದು. ಆಕಸ್ಮಿಕವಾಗಿ ಭೇಟಿಯಿತ್ತು ಎಲ್ಲರ ಕಾರುಣ್ಯದ ಕಣ್ಮಣಿಯಾದ ಅಕ್ಕ ಅನಿವಾರ್ಯವಾಗಿ ಅಗಲಬೇಕಾದ ಸನ್ನಿವೇಶ, ಯಾರ ಜೀವನದಲ್ಲಾದರೂ ಪರಸ್ಪರ ಭೇಟಿಯ ಆಕಸ್ಮಿಕ ಸಂದರ್ಭಗಳು ಬಂದೇ ಬರುತ್ತವೆ. ಅಂತೆಯೇ ಅನಿವಾರ್ಯವಾಗಿ ಅಗಲಬೇಕಾದ ಸಂದರ್ಭಗಳೂ ಇದ್ದೇ ಇರುತ್ತವೆ. ಭೇಟಿ-ಬೀಳ್ಕೊಡುಗೆಗಳ ಮಧ್ಯೆ ಇದ್ದ ಬದುಕೇ ಮುಖ್ಯವೆಂಬುದನ್ನು ಅಕ್ಕನಂತವರು ಎತ್ತಿತೋರಿಸುತ್ತಾರೆ. ಅಸಂಖ್ಯಾತ ಶರಣರ ಭಾವಭಿಕ್ಷೆಯಿಂದ ತೃಪ್ತಳಾದ ಅಕ್ಕಮಹಾದೇವಿ ಕೃತಜ್ಞತಾ ಭಾವದಿಂದ ತೆರಳುವ ಮುನ್ನ ವ್ಯಕ್ತಪಡಿಸಿದ ಮಾತುಗಳು ಅದೆಷ್ಟು ಹೃದಯವಂತಿಕೆಯಿಂದ ತುಂಬಿವೆ ಎಂಬುದನ್ನು ಪರಿಭಾವಿಸಿದಾಗ ಬದುಕಿನ ದೃಷ್ಟಿ ತೆರೆದು ಕೊಳ್ಳುತ್ತದೆ. ತಾನು ಮುಂದೆ "ಬಸವಣ್ಣ ಒಪ್ಪುವಂತೆ ಒಗೆತನವ ಮಾಡುವೆ" ಎಂಬ ಮಾತು ಬಸವಣ್ಣ ಹೇಗೆ ಒಳ್ಳೆಯ ಜೀವನಕ್ಕೆ ಮಾನದಂಡವಾಗಿ ಬೆಳಗಿದ ಎಂಬುದು ವ್ಯಕ್ತವಾಗುತ್ತದೆ. ಅಕ್ಕನಂತವರು ಬಸವಣ್ಣನನ್ನು ಆದರ್ಶಪುರುಷನನ್ನಾಗಿ ಹೇಗೆ ಗೌರವಿಸಿದರು ಎಂಬುದನ್ನು ನಾವಿಂದು ಮನನ ಮಾಡಬೇಕಾಗಿದೆ. ನಮ್ಮ ಬದುಕಿಗೆ ದಾರಿತೋರಿದ ಹಿರಿಯರು ಒಪ್ಪುವಂತೆ ನಾವಿಂದು ಬದುಕುತ್ತಿದ್ದೇವೆಯೇ. ಆತ್ಮವಿಮರ್ಶೆ ಅಗತ್ಯವಾಗಿದೆ ಮಹಾತ್ಮಗಾಂಧಿಯಂಥ ಪುಣ್ಯಪುರುಷರು ನಮಗೊಂದು ಮುಕ್ತಾವಕಾಶವನ್ನು ಕಲ್ಪಿಸಿಕೊಟ್ಟು ನೈಜವಾದ ಭಾರತೀಯರಾಗಿ ಬದುಕುವ ಕಲೆಯನ್ನು ಕಲಿಸಿಕೊಟ್ಟು ಹೋದರು. ನಾವೇನು ಮಾಡಿದೆವು? ಆ ಪವಿತ್ರಾತ್ಮರು ಒಪ್ಪುವಂತೆ ಬಾಳುತ್ತಿದ್ದೇವೆಯೇ ? ಅಷ್ಟುಬೇಡ ನಮಗೆ ಜನ್ಮವಿತ್ತ ಮಾತಾಪಿತೃಗಳ ಮನ ಒಪ್ಪುವಂತೆ ಎಷ್ಟುಜನ ಜೀವನ ಪಥದಲ್ಲಿ ಸಾಗಿದ್ದೇವೆ. ಯಾರು ಒಪ್ಪಿದರೇನು ? ಬಿಟ್ಟರೇನು ? ನನ್ನ ಹಾದಿ ನನ್ನದು ಎಂಬುವ ಹುಂಬ ಧೋರಣೆ ಇಂದು ಎಲ್ಲೆಲ್ಲೂ ವಿಜೃಂಭಿಸಿದೆ. ಜನನಾಯಕರು ಪ್ರಜೆಗಳು ಒಪ್ಪುವಂತೆ ನಡೆದುಕೊಳ್ಳುತ್ತಿಲ್ಲ; ಧರ್ಮಗುರುಗಳು ಭಕ್ತಾದಿಗಳು ಒಪ್ಪುವಂತೆ ನಡೆದು ಕೊಳ್ಳುತ್ತಿಲ್ಲ! ಅಧಿಕಾರಿಗಳು ಸಾರ್ವಜನಿಕರು ಒಪ್ಪುವ ಹಾದಿ ತುಳಿಯುತ್ತಿಲ್ಲ, ವಿದ್ಯಾರ್ಥಿಗಳು ಅಧ್ಯಾಪಕರು ಒಪ್ಪುವಂತೆ ಬೆಳೆಯುತ್ತಿಲ್ಲ, ಉದಾಹರಣೆಗಳನ್ನು ಬೆಳೆಸುಬಹುದು. ಭ್ರಷ್ಟತೆಯೇ ಬದುಕಿಗಿಂದು ಹೆದ್ದಾರಿಯಾಗಿದೆ.. ಪ್ರಾಮಾಣಿಕತೆ ನರಳುತ್ತಿದೆ. ಸಾತ್ವಿಕತೆ, ನಿಷ್ಠೆಗಳೆಲ್ಲ ಗಾಳಿಗೆ ತೂರಿವೆ. ಜೀವನದ ಎಲ್ಲ ಕ್ಷೇತ್ರಗಳಲ್ಲೂ ''ಕಿರಾತಕರು ಹೆಚ್ಚಿ ಪುರಾತರು ಕಣ್ಮರೆಯಾಗುತ್ತಿದ್ದಾರೆ. ನಮಗೊಂದು ಸತ್ಪರಂ

ಪರೆಯಿದೆ ಶ್ರೀಮಂತ ಸಾಂಸ್ಕೃತಿಕ ಹಿನ್ನಲೆಯಿದೆ ಎಂಬುದನ್ನು ಮರೆತು ಓಡು. ತ್ತಿದ್ದೇವೆ ಮನುಷ್ಯ ಮನುಷ್ಯನನ್ನೆ ಕಿತ್ತು ತಿನ್ನುತ್ತಿದ್ದೇವೆ ಎಂಬುದರ ಜೊತೆಗೆ ಮಾನವೀಯತೆಯನ್ನೇ ಸುಟ್ಟು ಭಸ್ಮಮಾಡುತ್ತಿದ್ದೇವೆ ಎಂಬುದನ್ನು ಕಾಣಲಾರದ ವರಾಗುತ್ತಿದ್ದೇವೆ. ಬಸವಣ್ಣ ಬೇಡ, ಅಕ್ಕ ಬೇಡ, ಮಹಾತ್ಮ ಗಾಂಧಿ ಬೇಡ ಕೊನೆಗೆ ಜನ್ಮವಿತ್ತ ತಂದೆತಾಯಿಗಳು ಒಪ್ಪುವಂತೆ ಬಾಳುವ ಪ್ರವೃತ್ತಿ ನಮ್ಮದಾಗುತ್ತಿದೆಯೇ ಎಂದು ಯೋಚಿಸಬೇಕಾಗಿದೆ. ಯುವ ಜನಾಂಗವಂತೂ ಕಣ್ಣಿಗೆ ಬಟ್ಟೆಕಟ್ಟಿಕೊಂಡು ಕತ್ತಲೆಯಲ್ಲಿ ನಾಗಾಲೋಟ ಪ್ರಾರಂಭಿಸಿದ್ದಾರೆ ದಾರಿ ತೋರುವವರು ಯಾರು?

ಒಪ್ಪುವಂತೆ ಬಾಳುತ್ತಿದ್ದೇವೆಯೇ ? ಕಾಲ, ಧರ್ಮಗಳ ಕಣ್ಣಿನಲ್ಲಿ ?

---

## ಹರಸೂನು

ಗುರುದೇವ ನೀಬಂದು ಬುವಿಯ ದೇವವೆನ್ನಿಸಿದೆ
ಕರುಣಾಳು ಯತಿಕುಲಾಂಬುಧಿ ಸೋಮನೇ ||ಪ||

ಪೂರ್ವಾಶ್ರಯುವ ಬಿಟ್ಟಿ ವಿಷಯಕುಲವನೆ ಸುಟ್ಟಿ
ಚಾರ್ವಾಕಪಂಥದಲಿ ಅಸ್ತಿಕ್ಯ ನೆಟ್ಟಿ
ಗೀರ್ವಾಣ ವಾಣಿಯಲಿ ಅಧಿಕಾರವನು ತೊಟ್ಟಿ
ಪೌರ್ವಾತ್ಯ ಸಂಸ್ಕೃತಿಯ ಹಿಡಿದು ಮೇಲಿಟ್ಟಿ ||೧||

ಪರಮಾನುಭವಬಂಧಿ ಉದ್ದಾನ ಗುರುವರನ
ಕರಕಮಲ ಸಂಜಾತ ಮಹಿಮಾಕರ
ಹರಶರಣರಡಿಯಿಟ್ಟ ಬಟ್ಟೆಯೊಳೆ ನೀನಡೆದೆ
ಹರಸೂನು ನೀ ಸಿದ್ಧಲಿಂಗೇಶ್ವರ ||೨||

ಜಗದ ಜಂಜಡವನ್ನು ತೃಣಕು ಕಡೆಯಾಗಿಸಿದೆ
ಹಗರಣವ ಪಡುವವರ ಸಂತೈಸಿದೆ
ಹಗಲಿರುಳು ಲೋಕಕಲ್ಯಾಣವನೆ ಚಿಂತಿಸಿದೆ
ನಿಗಮಗೋಚರ ನಿಜಕು, ಎಂದೆನಿಸಿದೆ ||೩||

ಜ್ಞಾನಾನ್ನದಾನಿ ಶಿವ-ಸಿದ್ಧ ಗಂಗಾಧಿಪತಿ
ಮಾನ್ಯೋನ್ನತನೆ ಸಚ್ಚಿದಾನಂದನೆ
ಜೇನಾಗಿರುವೆ ಜನಕೆ ಗುರಿಯಾಗಿರುವೆ ಮನಕೆ
ನಾನಾ ಮಹತ್ತಿನ ಜಿತಾನಂಗನೆ ||೪||

ಕಸವೆಘನವೆಂಬುದನು ಗಳಿಸಿನೀ ತೋರಿಸಿದೆ
ಜಪ-ಧ್ಯಾನಗೈವಾಗ ಪಶುಪತಿಯೆ ನೀನು
ವಿಪುಲಾಶ್ರಯವನಿತ್ತು ವಿದ್ಯಾರ್ಥಿಗಳ ಪೊರೆದೆ
ಉಪಕೃತಿಯ ಮರೆಯುವೆನೆ ಎಂದೆಂದು ನಾನು ||೫||

—ಪುಲಿಕೇಶಿ

# ಚಿಂತನ

--ಡಾ|| ಸಾ. ಶಿ. ಮರುಳಯ್ಯ ನಂ. ೩, ಸರ್ವೀಸ್ ರಸ್ತೆ, 2ನೇ ಹಂತ,
ವಿಜಯನಗರ, ಬೆಂಗಳೂರು-40

ಕೊಡುವಾತನೇ ಹರನು ಪಡೆವಾತನೇ ನರನು
ಒಡಲು ಒಡವೆಗಳು ಕೆಡೆದು ಹೋಗುವ ಮುನ್ನ
ಕೊಡು ಪಾತ್ರವರಿದು ಸರ್ವಜ್ಞ.

**ದಾನದ ಮಹತ್ವ ಈ ವಚನದ ತಿರುಳು**

ಪರಮ ಪರಿವ್ರಾಜಕನೂ ಪೂರ್ಣಲೋಕಾನುಭವಿಯೂ ಆದ ಸರ್ವಜ್ಞನು
ನ ಮೂರು ಪಾದಗಳಲ್ಲಿ ಮೂರು ಅಂಶಗಳನ್ನು ಸ್ಪಷ್ಟೀಕರಿಸಿದ್ದಾನೆ.

ಮೊದಲನೆಯ ಪಾದವು ದಾನ ಕೊಡುವವನು ದೇವಸಮಾನ, ದಾನ
ಯುವವನು ಮಾನವ ಸದೃಶ ಎಂಬಂಶವನ್ನು ತಿಳಿಸುತ್ತದೆ. ಇಲ್ಲಿ 'ಮಾನವ'
ಬ ಶಬ್ದಕ್ಕೆ 'ಕೀಳು' ಎಂದರ್ಥವಲ್ಲ, ದೇವನಷ್ಟೇ ಸತ್ವಶಾಲಿ ಚೈತನ್ಯ ಎಂದು.
ಂದರೆ ಮನುಷ್ಯರೇ ಅಲ್ಲದ, ಪಶುವಿಗೂ ಕಡೆಯಾದ ಹೀನ ವ್ಯಕ್ತಿಗಳಿದ್ದಾರೆ
ಯ್ಮಲ್ಲಿ. ಅಂಥವರಲ್ಲದ ನಿಜವಾದ ಹಾಗೂ ಗೌರವದ ಅರ್ಥದಲ್ಲಿ 'ಮಾನವ'
ಬ ಪದವನ್ನು ಅರ್ಥೈಸಲಾಗಿದೆ. ಇಂತಹ ದೇವ ಮಾನವರಿದ್ದರೇನೇ ವಿಶ್ವ
ನುರಸ್ಯ. ಇವರಲ್ಲಿ ಭಿನ್ನ ಭಾವಇಲ್ಲ; ಇರಬಾರದು. ಇಬ್ಬರೂ ಸಮಾನರು.
ಡುವವನ ಕೈಮೇಲು ಪಡೆವವನ ಕೈ ಕೆಳಗು ಎಂಬ ಭೇದಸಲ್ಲ. ಹಲವು
ಳಿ ದಾನ ಕೊಡಬೇಕು ಎಂದಂದುಕೊಂಡರೂ ಅದನ್ನು ಸ್ವೀಕರಿಸುವ ವ್ಯಕ್ತಿಯೇ
ದಿರಬಹುದು. ವ್ಯಕ್ತಿ ಸಿಕ್ಕಾಗ ಮಾತ್ರ ದಾನಿಯ ದಾನಗುಣ ಪ್ರಕಾಶಕ್ಕೆ
ುವುದು. ಆ ಮೂಲಕ ಅವನು ಧನ್ಯನಾಗುವುದು ಕೂಡ. ಆದ್ದರಿಂದ ದಾನ
ಡುವವನು ಎಷ್ಟು ಮುಖ್ಯವೊ ಗೌರವಾನ್ವಿತನೋ ದಾನ ಸ್ವೀಕರಿಸುವವನೂ
ಷ್ಟೇ ಮುಖ್ಯ ಮತ್ತು ಗೌರವಾನ್ವಿತ. ಕೊಟ್ಟವನಿಗೆ ಅಲೌಕಿಕ ಪುಣ್ಯ ಪ್ರಾಪ್ತಿ.
ಡೆದವನಿಗೆ ಲೌಕಿಕ ಅಗತ್ಯತೆಯ ಪೂರೈಕೆ ಮತ್ತು ತೃಪ್ತಿ. ಈ ಅಂಶಾಭಿವ್ಯಕ್ತಿ
ೕಲಿನ ತ್ರಿಪದಿಯ ಸಾಲು.

'ಒಡಲು ಒಡವೆಗಳು ಕೆಡೆದು ಹೋಗುವ ಮುನ್ನ' ಎಂಬ ಎರಡನೆಯ
ಾದದಲ್ಲಿ ದಾನವೀವ ಸಮಯವನ್ನು ಸೂಚಿಸಿದ್ದಾನೆ ಸರ್ವಜ್ಞ. ದಾನವನ್ನು
ಾವಾಗ ಕೊಡಬೇಕು;

ನೆರೆ ಕೆನ್ನೆಗೆ ತೆರೆಗಲ್ಲಕೆ ಶರೀರ ಗೂಡುಪೋಗದ ಮುನ್ನ
ಹಲ್ಲುಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ ಕೋಲಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ ಮೃತ್ಯುಮುಟ್ಟದ ಮುನ್ನ.

ಅಂತೆಯೇ ಕೊಡುವ ವಸ್ತು ಕೊಳೆತು ಕೆಟ್ಟು ಹೋಗುವ ಮುನ್ನ, ಹಳಸಿ ಹಾಳಾ
ಮುನ್ನ ಕೈ ಎತ್ತಿ ದಾನಕೊಡಬೇಕು. ಅನ್ನ ಹಳಸಿದೆ ತಿನ್ನಲಿಕ್ಕೆ ಬಾರದು ಅ
ಭಿಕ್ಷುಕನಿಗೆ ಹಾಕು ಎಂಬ ಮನೋಭಾವ ಯಾರಲ್ಲೂ ಬೆಳೆಯಬಾರದು
ಸಂದೇಶ ಇದೆ ಈ ಎರಡನೆಯ ಸಾಲಿನಲ್ಲಿ.

ಮೂರನೆಯ ಸಾಲು ಬಹು ಮುಖ್ಯವಾದದ್ದು. ದಾನ ಯಾವಾಗಲೂ
ತ್ರಕ್ಕೆ ಸಲ್ಲಬೇಕು. ಅಂತಹ ಸತ್ಪಾತ್ರವನ್ನು ಹುಡುಕಿ ನಾವು ದಾನ ಮಾಡಬ
ಅಪಾತ್ರಕ್ಕೆ ಕೊಟ್ಟದ್ದಾದರೆ ಅನಾಹುತಕ್ಕೆ ನಾವೇ ಅಡಿಗಲ್ಲು ಹಾಕಿದಂತಾಗು
ಉದಾಹರಣೆಗೆ, ಯಾರ ತಲೆಯ ಮೇಲೆ ನೀನು ಕೈಇಡುತ್ತೀಯೋ ಅವರು ಸ
ಬೂದಿಯಾಗಲಿ ಎಂದು ಶಿವ ವರಕೊಟ್ಟಕೂಡಲೆ ಭಸ್ಮಾಸುರ ಅವನ ಮೇಲೆ
ಮೊದಲ ಪ್ರಯೋಗ ಮಾಡ ಹೊರಟ. ಅನೇಕ ವೇಳೆ ಇಂತಹ ಅಪಾಯ
ಸಿಲುಕಿಕೊಳ್ಳುವುದುಂಟು. ಅದನ್ನೇ ಕನ್ನಡದ ಗಾದೆ ಹೇಳುತ್ತೆ; 'ಕೊಟ್ಟ
ಕೋಡಂಗಿ ಈಸಿಕೊಂಡವನು ವೀರಭದ್ರ' ಎಂದು. ಅನ್ನವಿಟ್ಟ ಕೈಯನ್ನೇ ಕಚ
ನಾಯಿಗಳೇನೂ ಕಡಿಮೆ ಇಲ್ಲ ಈ ಜಗತ್ತಿನಲ್ಲಿ. ವಿದ್ಯಾರ್ಥಿ, ಸಹೋದ್ಯೋಗಿ, ಸ್ನೇ
ರಕ್ತ ಸಂಬಂಧಿ ಒಬ್ಬರೇ ಇಬ್ಬರೇ? ಅನೇಕ ಮಂದಿ ಮುಖವಾಡ ಹಾಕಿಕೊ
ಬಂದು ದ್ರೋಹ ಬಗೆದಿದ್ದಾರೆ. ಆದ್ದರಿಂದ ದಾನಿಗೆ ಪಾತ್ರಾಪಾತ್ರಗಳ ವಿವೇಚನೆ
ಬೇಕು. 'ಪಯಃ ಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ' ಅಂದರೆ ಹಾ
ಕುಡಿದು ಹಾವು ಕೇವಲ ವಿಷವನ್ನೇ ಉತ್ಪಾದಿಸುತ್ತದೆ. ಅಮೃತವನ್ನಲ್ಲ ದಾ
ಫಲ ಅಂತಾಗ ಬಾರದು.

ಸಾಮಾನ್ಯವಾಗಿ ಅಪಾತ್ರಕ್ಕೆ ಅಂದರೆ ಅಯೋಗ್ಯ ವ್ಯಕ್ತಿಗೆ ದಾನ, ಸ
ಗೌರವ, ಮನ್ನಣೆಗಳು ಸಲ್ಲುವುದುಂಟು. ಅಂತಹ ನೀಚರು ಲೋಕ ಕಂಟಕರೇ
ಬಿಡುತ್ತಾರೆ. ಅವರು ತಾವೂ ಬದುಕುವುದಿಲ್ಲ ಅನ್ಯರನ್ನೂ ಬದುಕ ಬಿಡುವು
ಅಂತಹ ಅಪಾತ್ರರನ್ನು ಗೌರವಿಸುವುದು ಸತ್ಪಾತ್ರರನ್ನು ತಿರಸ್ಕರಿಸಿದ್ದಕ್ಕಿಂತಲೂ ಅಪ
ಆದ್ದರಿಂದ ಮಹಾಕವಿ ರತ್ನಾಕರವರ್ಣಿ ಹೇಳುವಂತೆಃ ಕೊಡಬೇಕು, ಕೊಡುವಲ್ಲಿ ಪ
ಅರಿಯಬೇಕು, ಅರಿಯದೆ ಕೊಟ್ಟರೆ ಅದರ ದುಷ್ಫಲವನ್ನು ಸಾತ್ವಿಕನೂ ಅನುಭ
ಬೇಕಾಗುತ್ತದೆ.

ಇಂತಹ ನೆಲೆಗಟ್ಟಿನ ಮೇಲೆ ನಿಲ್ಲಿಸಿ ಎಚ್ಚರಿಸುವ ಸರ್ವಜ್ಞ ನಮಗೆ ಇಂದಿ
ಎಂದಿಗೂ ಪ್ರಸ್ತುತವಾಗುತ್ತಾನೆ.

ಸಿದ್ಧಗಂಗಾ

# ಶ್ರೀ ಉದ್ದಾನೇಶ್ವರ ಶತಕಂ

(ಮುಂದುವರೆದ ಭಾಗ)

ವೇದವೇ ವಿದ್ಯೆಯೊಳಗಧಿಕವು
ವೇದದೊಳು ಶ್ರೀ ರುದ್ರವಧಿಕವು
ವೇದಶಿರ ಶ್ರೀರುದ್ರದೊಳು ಶಿವಮಂತ್ರವತ್ಯಧಿಕಾ।
ಆದಿಪಂಚಾಕ್ಷರಿಯೊಳಾ ಶಿವ
ನಾದಿ ವರ್ಣಗಳೆರಡು ಪ್ರಣವಗ
ಳೆಂದು ತಿಳಿಸಿದ ಸ್ವಾಮಿ ಉದ್ದಾನೇಶ ದಯವಾಗೋ॥

ನೆರಳನತಿಥಿಗೆ ಕೊಡಲು ಮನೆಯಿದು
ಕರುಣಿಯಡಿಗೆಯು ಮಾಡಲತಿಥಿಗೆ
ಧರಣಿಧಾನ್ಯಕೆ ಪಶುವು ಹೈನಿಗೆ ತರಳನವಸರಕೇ।
ಸಿರಿಯು ಪಾತ್ರದಿ ದಾನ ಮಾಡಲು
ಹರನು ಕೊಟ್ಟಿಹನೆಂದು ತಿಳಿಸಿದ
ಶರಣ ಗಾತ್ರನೆ ಜೀಯ ಉದ್ದಾನೇಶ ದಯವಾಗೋ॥

ಲೋಕದರಮನೆಯೊಳಗೆ ದೇವರ
ಚಾಕರರು ನಾವೆಮಗೆ ಪ್ರಕೃತಿಯ
ನೇಕ ಸಂಬಳ ಸಾಕು ಸಾಕೆನುವಂತೆ ದೊರೆಯುವುದೂ।
ಸಾಕು ಸಾಲದ ರಾಜಜೀತಕ
ನೇಕ ಪರಿಮಿಗಿಲದರೊಳಗೇ ಜಗ
ಸಾಕಿ ಪಲಹುತ್ತಿರುವ ಉದ್ದಾನೇಶ ದಯವಾಗೋ॥

ಐದು ಭೂತಗಳೇ ಖಜಾನೆಗ
ಳೈದು ತತ್ವವೇ ಪಂಚಲೋಹದಿ
ದೈದು ಮುಖದೊಳು ಹೊತ್ತು ತಂದುದನಾರು ಕಾಣದಲೂ।
ಹೊದ್ದು ಮಲಗಿರೆ ಬುದ್ಧಿಗೆಟ್ಟರೆ
ನಿದ್ದೆಯೊಳಗಿರಲೊದ್ದು ಮುದ್ದಿಸಿ
ಗುದ್ದುಕೊಡುತಿಹ ಸಿದ್ಧ ಉದ್ದಾನೇಶ ದಯವಾಗೋ॥

ಮುಂದುವರೆಯುವುದು

# ಬಸವತತ್ವ ರತ್ನಾಕರ-13.

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡಕವಿಕಾಳಿದಾಸ" ಅಥಣಿ. (ಬೆಳಗಾವಿಜಿಲ್ಲೆ)

## ದಿವ್ಯಸ್ವಪ್ನ ಸೃಷ್ಟಿ (117)

**ಶಿವಶಾಸನ**- "ಹರವಾದ ಎನ್ನೆದೆಯ ಲಿಖಿತ ಶಿವಶಾಸನ
ಫಲಕವೆಂಬಂತೆ ಕಂಗೊಳಿಸಿತ್ತು ನೋಡಾ!
ಹರಹಿರ್ದ ರೋಮರಾಜಿ ಎದೆಯ ಹದವಪ್ಪ ಭೂಮಿಯೊಳು
ನಾಟಿಕೆಗಳಾಗಿ ಕರಿಯ ಕೇಸರಿಯ ಸಸಿಯ
ವೋಲೆಸೆಯುತಿರ್ದುವು ನೋಡಾ!
ಅಕ್ಷರಾಕೃತಿಗೊಂಡು ನಾಟಿ ನಿಂದಿರ್ದೀ ರೋಮ ಸಸಿಗಳೆಲ್ಲ
ಅಕ್ಷಯವಹ ಶಿವತತ್ತ್ವರಹಸ್ಯ ಜ್ಞಾನ
ಶ್ಲೋಕವಚನ ಗೀತಂಗಳಾ
ಲಿಪಿ ನಾಟಿಕೆಗಳಾಗಿ ರೂಪುಗೊಂಡು
ರಾಜಿಸುತಿರ್ದುವು ನೋಡಾ!
ಇಂತು ಬಸವತತ್ತ್ವ ರತ್ನರಾಶಿ ಸೂರೆಗೊಂಡಿರಲೆನ್ನೆದೆಯ
ಭೂಶಿರದ ಮೇಲೆಲ್ಲ!
ಸಂತ ಶ್ರೇಷ್ಠ ಭಕ್ತಿನಿಧಿ "ಬಸವತತ್ತ್ವ ರತ್ನಾಕರ" ವಚನಾಮೃತ
ಕೃತಿಯನಿಂದು, ಸಂತಸದಿಂ "ಕನ್ನಡಕವಿಕಾಳಿದಾಸಂ"
ಕರುಳಿನ ಕನ್ನಡನಾಡವರ್ಗಿತ್ತಪನಲ್ತೆ ಪೆರತುಂಟೆ?
ಹೇಳಾ, ಶ್ರೀಶೈಲ ಮಲ್ಲಿಕಾರ್ಜುನ!"

## ದಿವ್ಯಕಾಯಕಾಂತಿಸಮಾಧಿಗಳು (118)

"ವಿಶಾಲವಾಗಿರ್ಪ ಕನ್ನಡಿಯ ನುಣ್ಣನಿಂದೆಸೆವಪರಿಯ
ವಿಶಾಂತಿ ಸ್ಥಲಮೆನೆ, ನೆಲೆಗಟ್ಟಿನಾ ನೆಲಮನೆಯೊಂದುಂಟು ನೋಡಾ!
ಸಾಲುಗಂಬಗಳಿಂ ಕಂಗೊಳಿಪ ಮಹಾಮನೆಯೊಳಲ್ಲಿ
ಸಾಲು ಸಾಲುಗೊಂಡಿರ್ಪ ಪರಂಜ್ಯೋತಿ ಸಂಕೇತಗಳಾಗಿರ್ದ
ಮಹಾಗದ್ದಿಗೆಗಳುಂಟು ನೋಡಾ!
ಇಂತಪ್ಪ ಪವಿತ್ರ ಸಮಾಧಿಗಳಲ್ಲಿ ಚಿದ್‌ಭಸ್ಮ ಬೆಳಗನೊಳಗೊಂಡ
ಕಂತುಹರ ಕೈಲಾಸ ಪ್ರಮಥ ಗಣರೆನೆ ಮಹಾಜ್ಞಾನಿಗಳಾ ದಿವ್ಯದೇಹ
ಕಾಂತಿರವಿಕೋಟಿ ಕಿರಣಂಗಳೊಡವೆರೆದ ಮಹಾ ಬೆಳಗು ಕೂಡಿತ್ತು ನೋಡಾ!
ಇಂತು ಪ್ರಮಥಗಣ ಪ್ರಣವಕಾಯದಾ ಚಿತ್‌ಸೂರ್ಯ
ಬೆಳಗಿನಿಂ ಬೆಳಗುತಿಹ ಅದೆನಿತೊ
ಗದ್ದುಗೆಗಳಲ್ಲಿ ಸಾಲುಗೊಂಡಿರಲು

ಮುಕ್ತ ಹನಿಗೊಂಡೆನ್ನ ಕಂಗಳು ಕಂಡು ಆನಂದ ಬಾಷ್ಪ ಸುರಿಸುತಿರಲು
ಸುತ್ತೆಲ್ಲ ಸಂಚರಿಸಿ ನೋಡುತಲಿದ್ದೆ ನಾನಲ್ಲಿ!
...ಂತು ಭೂತಲದೊಳ್ ತೋರುತ್ತಿರ್ಪ ಈ ಮಹಾದೃಶ್ಯಂಗಳೆಲ್ಲ
...ಂತಸದ ಸುಧಾ ಸುರಿಮಳೆಯೆನೆ ಶ್ರೀ ಬಸವಾದಿ ಪುರಾತನರ ಮಹಿಮೆಯಾ
ದ್ಯೋತಕವಲ್ತೆ? ನೀನೆ ಹೇಳಾ, ಶ್ರೀ ಶೈಲಮಲ್ಲಿಕಾರ್ಜುನ!"

**ಬಸವಣ್ಣ ಕರವಿಡಿದೆತ್ತಿ ಕೊಂಡ: [119]**

"ಘೋರಾರಣ್ಯದೊಳೊಂದು ತಗ್ಗಿನೊಳು ನಿಂದಿರಲು
ಯಾರಿಲ್ಲದಲ್ಲಿ ಮುಚ್ಚಂಜೆಯಾಗಿ ಕತ್ತಲೆ ಕವಿದಾಗ
ಭೋರೆಂಬ ಪುಳು ಕಿರ್ರೆಂಬ ನಾದ ಭಯಗ್ರಾಹಿಯಾಗಿರಲು ನಾ
ಏರಿ ಮೇಲೆ ಬರ್ಪೆನೆಂದಡೆ, ಬಾರದಂತಾಗಿ ಬಸವಳಿದು
ಧೃತಿಗೆಟ್ಟು ಬಳಲುತಿರ್ದೆನಯ್ಯಾ!
ಆಗ ನಾ ನಿಮ್ಮ ಧ್ಯಾನಿಸುತೆ ಬಸವಾ ಬಸವಾ ಎಂದೊಡನೆ,
ಸಾಗಿ ಬಂದೆನ್ನ ಕರುಣದಿಂ ನೋಡಿ ಕರವಿಡಿದು ಮೇಲೆತ್ತಿ
ವೈದಡವಿ, ಮರಳಿ ನಾ ನೋಡುವನಿತರೊಳು ನೀ
ವೃದ್ಧನಾಗಿ, ತಲೆಗೆ ರುಮಾಲು ಬಗಲಂಗಿ ಧೋತ್ರವನ್ನುಟ್ಟು
ಬಂದಿರ್ದ ಬಸವತಂದೆ ಕಾಣದಂತಾಗ ಬೇಕೇನಯ್ಯಾ!
ಬಸವಣ್ಣ ತಂದೆಯೆ ದಯಾನಿಧಿಯೆ ಭಕ್ತ ಪ್ರೇಮಿಯೇ
ಅಸಮಾಕ್ಷನಪರಾವತಾರಿಯೆ ಎನಿತು ತವ ಮಹಿಮೆಯು
ಆನು ಬಣ್ಣಿಸಿದೊಡು ಕಡಿಮೆಯೆ ಕಂಡಯ್ಯಾ!
ಬಸವರಾಜ ನಿಮ್ಮ ಪದ ಪಂಕಜದೊಳಾನು ಭಕ್ತಿಭೃಂಗ
ವಾಗಿಪ್ಪಂತೆ ಮಾಡಿ ಕರುಣಿಸಿ ಸಲಹಯ್ಯಾ!
ಬಸವ ತಂದೆಯೆ ನಿಮ್ಮ ಧರ್ಮ! ನಿಮ್ಮ ಧರ್ಮ!
ನೋಡಯ್ಯಾ! ಶ್ರೀಶೈಲ ಮಲ್ಲಿಕಾರ್ಜುನ"

**ಬಸವರಾಜ ಅಂತರಿಕ್ಷದೊಳ್ ನಡೆಯಿಸಿದ:-[120]**

ಎಲ್ಲೆಲ್ಲೂ ಜಲವೆ ಕಾಣುತಿರ್ಪ ಸಾಗರದ ಮಧ್ಯದೊಳಿಪ್ಪಾಗ, ಹೇಗೆ
ಪಾಳ್ಪುದೆಂದಾನು ಭಯಗೊಂಡು ಹೃದಯ ಕಂಪಿಸಿ ಕಳವಳಿಸಿ ಕಂಬನಿದುಂಬಿ
ಬಸವ ತಂದೆಯೆ ಎನಗಿನ್ನಾರು! ನೀನೆ ಗತಿಯೆಂದು
ನೀನೆ ಮತಿಯೆಂದು ದೃಢಮನದಿಂ ನಂಬಿ
ಪೊಸೆದು ಬಸವಾ ಬಸವಾ ಬಸವಾ ಎಂದು ಭಕ್ತಿಯಿಂ ಸ್ಮರಿಸುತಂ

ಬಸವ ಕೃಪೆಯಿಂದಂತರಿಕ್ಷ ಮಾರ್ಗದೊಳ್ ಚರಿಸುತಂ
ಸಿರಾಯಾಸದಿಂ ನಡೆತಂದು ದಂಡೆಗಂಡೆನಯ್ಯಾ!
ಬಸವ ತಂದೆಯೆ ಜೀವನದ ಪ್ರತಿಕ್ಷಣದಿ ನಿಮ್ಮ
ಮಹಿಮೆಯ ಕಂಡು ಮನದಣಿ ಉಂಡು ನಿಮ್ಮ
ನಾಮಸ್ಮರಣೆಯಿಂದಾನು ಬದುಕಿರ್ದೆನಯ್ಯಾ!
ಬಸವ ನೀ ನುಡಿಸಿದಾಗಳೆನ್ನ ನುಡಿ ನೋಡಯ್ಯಾ!
ಬಸವ ನೀ ನಡೆಸಿದಾಗಳೆನ್ನ ನಡೆ ನೋಡಯ್ಯಾ!
ಬಸವ ನೀ ಸೃಜಿಸೆ ಸೃಷ್ಟಿ! ರಕ್ಷಿಸೆ ರಕ್ಷಣೆ ಕಾಣಯ್ಯಾ!
ಬಸವ ನೀ ನಿಂದು ಜಲಸಾಗರದಿಂ ದಾಂಟಿಸಿದಂತೆಯೆ
ಭವ ಸಾಗರದಿಂದೆನ್ನನು ನೀ ಕೃಪೆಗೆಯ್ದು
ಜವದಿ ಕಡೆಗಾಣಿಸಯ್ಯಾ! ಧರ್ಮರವಿಯೆ!
ನೀನೆ ಹೇಳಾ ಶ್ರೀಶೈಲ ಮಲ್ಲಿಕಾರ್ಜುನ!

**ಮಹಾದಾನಿ ಪ್ರಮಥರು [121]**

"ಲಿಂಗಭಕ್ತಿ ಮಹಾದಾನದ ಫಲ-ಬ್ರಹ್ಮಾಂಡದೊಳಗೆಲ್ಲ, ಭಕ್ತಿಭಾಗ್ಯ
ಲಿಂಗ ಬೀಜವ ಬಿತ್ತಿದ, ಭಕ್ತಿಭಂಡಾರಿ
ನಮ್ಮ ಬಸವಣ್ಣಂಗಾಯಿತ್ತು ನೋಡಾ.
ಷಟ್‌ಸ್ಥಲ ಜ್ಞಾನದಾನದ ಫಲ-ಮೂಲೋಕ ಬೆಳಗುವಾ
ಷಟ್‌ಸ್ಥಲ ಜ್ಞಾನಮೂರ್ತಿ, ಅಖಂಡ ಜ್ಯೋತಿಮೂರ್ತಿಕೀರ್ತಿ!
ನಮ್ಮ ಚನ್ನಬಸವಣ್ಣಂಗಾಯಿತ್ತು ನೋಡಾ-
ವೈರಾಗ್ಯದಾನದಫಲ-ಕಾಲ-ಕಾಮ-ಮಾಯೆ ಗೆಲ್ದು, ವಿಶ್ವವನ್ನೆಲ್ಲ
ಬೆಳಗಿದಾ ವೈರಾಗ್ಯನಿಧಿ ತತ್ವಶಿಖಾಮಣಿ
ಮಹಾಶಕ್ತಿರೂಪಿಣಿ ಮಹಾದೇವಿಯಕ್ಕಂಗಾಯಿತ್ತು ನೋಡಾ.
ಶಿವಯೋಗ ಶಾಂತಿಯಿತ್ತಫಲ-ಜಗವಲ್ಲ ಬೆಳಕಾದ, ತಪಸ್ತೇಜೋಮೂರ್ತಿ
ಶಿವಯೋಗಿ ಲಲಾಮ ಜಿತಕಾಮ, ಸೊನ್ನಲಿಗೆ
ಸಿದ್ಧರಾಮಯ್ಯಂಗಾಯಿತ್ತು ನೋಡಾ!
ಲಿಂಗಾಂಗ ಸಮರಸ ಸೌಖ್ಯವಿತ್ತಫಲ:- ಧಾತ್ರಿಗೆಲ್ಲ ಮಂಗಳ ಬೆಳಕು ಕರೆದ ಬಸವಧಮ...
ಲಿಂಗಾನುಸಂಧಾನಿ ಮಹಾನುಭಾವೆ ನೀಲಾಂಬಿಕೆಗಾಯಿತ್ತು ನೋಡಾ
ಗುರುಭಕ್ತಿದಾನದ ಫಲ:-
ಲೋಕಕ್ಕೆ ಗುರುಭಕ್ತಿ ಮಹಿಮೆಯ ತೋರಿ, ಮಹೋಜ್ವಲ
ಬೆಳಕಾದ ಗುರು ಪ್ರಾಣಿ ವೀರಾಗ್ರಣಿ ಬಸವೇಶ್ವರನ
ಪುಣ್ಯಾಂಗನೆ ಮಹಾರಾಣಿ ಗಂಗಾಂಬಿಕೆಗಾಯಿತ್ತು ನೋಡಾ
ಸಿದ್ಧಗಂಗಾ 1992

ಪ್ರಸಾದ ಸುಖ ವೀವಫಲ-

ಮೇದಿನಿಗೆ ಮಹಾ ಪ್ರಸಾದ ಮಹಿಮೆಯ ತೋರ್ದ
ನಮ್ಮಡೋಹರ ಕಕ್ಕಯ್ಯಂಗಾಯಿತ್ತು ನೋಡಾ

ವೀರಗಣಾಚಾರ ಪ್ರಭೆಯಿತ್ತ ಫಲ-

ಭೂತಲದೊಳೆಲ್ಲ ವೀರಘಂಟೆಯ ಸುಡಿಸಿ
ಬೆಳಗಿದಾ ನಮ್ಮ ವೀರ ಶಿವಶರಣ "ವೀರಭದ್ರನಪರಾವತಾರಿ"
ತಂದೆ ಮಡಿವಾಳ ಮಾಚಿದೇವಂಗಾಯಿತ್ತು ನೋಡಾ.

ಮುಕ್ತಿದಾನದ ಫಲ–

ಅಮರ ಶಿವಲೋಕಂಗಳಿಗೂ ಬೆಳಕು ಸುರಿದ
ಆತ್ಮಜ್ಞಾನಿ, ನಿರಂಜನ ಪರಮ ಜಂಗಮ ಮೂರ್ತಿ
ವ್ಯೋಮಕಾಯ, ಮಾಯಾಕೋಲಾಹಲ
ಅಲ್ಲಮಪ್ರಭುದೇವಂಗಾಯಿತ್ತು ನೋಡಾ.

ಇಂತೀ ಚತುರ್ದಶ ಭುವನಂಗಳಿಗಿತ್ತ ಸರ್ವದಾನ ಫಲ
ನಮ್ಮ ಶ್ರೀಬಸವಾದಿ ಪ್ರಮಥರಿಗಲ್ಲದೆ ಬೇರಾರಿಗೂ ಇಲ್ಲ
ಕಾಣಾ, ಶ್ರೀಶೈಲಮಲ್ಲಿಕಾರ್ಜುನ"

## "ಅನುಭವ ಮಂಟಪ" [122]

**ಅನುಭಾವ ಗೋಷ್ಠಿ;**

"ಕಲ್ಯಾಣ ಪಟ್ಟಣದಿ ಬಸವಣ್ಣನಾ "ಅನುಭವ ಮಂಟಪ"
ತ್ರಿಭುವನ ಕೀರ್ತಿದಳೆದು ರಾಜಿಸುತಿಪ್ಪುದು ನೋಡಾ.
ಸಾಲುರತ್ನಗಂಬಳಿಂ ಮೇಲೆ ವಜ್ರಕಮಲ ಬೋದಿಗೆಗಳಿಂ
ಬೆಳ್ಳಿಬಾಗಿಲುಗಳಿಂ ಹಾಲುಬಣ್ಣದಾ ಶುಭ್ರ ನೆಟ್ಟನೆಯ ನೆಲಗಟ್ಟಯಿಂ
ನವರಂಗ ಬಣ್ಣಗಳಾ ರಂಗಲ್ಲಿವಯಿಂ ಅಲ್ಲ ವಜ್ರಕನಕಕಾಂತಿ
ಕಂಗೊಳಿಸುತಿಪ್ಪುದು ನೋಡಾ!

'ಅನುಭವ ಮಂಟಪದ' ಮಧ್ಯದಲ್ಲಿ ಸುವರ್ಣಕಮಲ
ರತ್ನಪೀಠವಾಂತ "ಶೂನ್ಯಸಿಂಹಾಸನ"ವಿರ್ಪುದು ನೋಡಾ.
ಪಶ್ಚಿಮ ಭಿತ್ತಿಯೊಳಲ್ಲಿ ಸೃಷ್ಟಿಯುತ್ಪತಿ ಪ್ರಳಯಂಗಳಾ
ರಹಸ್ಯಾದ್ಭುತ ವಿಶ್ವ ಬ್ರಹ್ಮಾಂಡ ಚಿತ್ರ ಚಿತ್ರಿಸಲ್ಪಟ್ಟಿತ್ತು ನೋಡಾ.
ಮತ್ತೆ ಕೈಲಾಸ ರವಿ ರಥ ಗತಿ ಪಥ ವೈಚಿತ್ರ್ಯಮಂ

ಮೇಣ್ 'ಶಿವಶಾಸನ' ದಿವ್ಯರಹಸ್ಯಲಿಪಿ ಚಿತ್ರಮಂ
ಬರೆಯಲಾಗಿತ್ತು ನೋಡಾ.
'ಅನುಭವ ಮಂಟಪ'ದಲ್ಲಿ ಅನುಭಾವ ಚರ್ಚೆ ನಿತ್ಯ ನಡೆಯುವುದು. ನೋಡಾ.
ಲಿಂಗಭೋಗೋಪಭೋಗಿ ಶಿವಶರಣರಾ
ಸಂಗ ಸುಖ ಸೌಭಾಗ್ಯ ನಾನೇ ನೆಂಬೆನಯ್ಯಾ
ಬೆಡಗಿನಾ ವಚನಾಮೃತ ತತ್ವಗಳಾ
ಸುರಿಮಳೆಗರೆಯುವರು ನೋಡಾ.
ಶೂನ್ಯ ಸಿಂಹಾಸನದ ಪದ್ಮ ಪೀಠದೊಳು ಪ್ರಭುವು ಕುಳ್ಳಿರ್ದ
ಸೊಬಗು ಸೌಂದರ್ಯ ನೋಡುವಾ ಕಂಗಳು
ತಣಿಯಲಾರವು ನೋಡಾ.
ಕಲ್ಯಾಣದ "ಅನುಭವ ಮಂಟಪ" ವಿಶ್ವಕಲ್ಯಾಣ ಕಾರಿಯಲ್ತೆ ?
ನೀವೆ ಹೇಳಾ, ಶ್ರೀ ಶೈಲಮಲ್ಲಿಕಾರ್ಜುನ"!

**ಶೂನ್ಯ ಸಿಂಹಾಸನ:** [123]

"ಅನುಭವ ಮಂಟಪ" ದೊಳಲ್ಲಿ ಏಳುನೂರೆಪ್ಪತ್ತು
ಪ್ರಮಥಗಣಂಗಳೆಲ್ಲ ಸರ್ವಾಂಗ
ಲಿಂಗಮಯರಾಗಿ ಬೆಳಗುತಿರ್ದರು ನೋಡಾ.
ಬಸವ ಭಾನುವಿನಾ ಸದ್‌ಭಕ್ತಿಯ ಬೆಳಕು.
ಚನ್ನಬಸವ ಚಂದ್ರಮನಾ ಸುಜ್ಞಾನ ಬೆಳಕು.
ಸಿದ್ಧರಾಮನಾ ಶಿವಯೋಗದ ಬೆಳಕು.
ನೀಲಾಂಬಿಕೆಯಾ ಲಿಂಗಯೋಗದ ಬೆಳಕು.
ಗಂಗಾಂಬಿಕೆಯಾ ಮಂಗಳ ಶಕ್ತಿ-ಭಕ್ತಿಯ ಬೆಳಕು.
ಮಹಾದೇವಿಯಕ್ಕಗಳಾ ತತ್ವಜ್ಞಾನ ವೈರಾಗ್ಯದ ಬೆಳಕು.
ಮಡಿವಾಳ ಮಾಚಿದೇವಯ್ಯಗಳಾ ರುದ್ರಗಂಭೀರ ಉಗ್ರಭಕ್ತಿ ಬೆಳಕು.
ವಚನ ಭಾಂಡಾರಿ ಶಾಂತರಸಗಳಾ ವಚನ ಭಕ್ತಿಯ ಬೆಳಕು.
ಬಿಬ್ಬಬಾಚಯ್ಯಗಳಾ ಅನುಭಾವ ಭಕ್ತಿ ಬೆಳಕು.
ಶಿವಲೆಂಕ ಮಂಚಣ್ಣಗಳಾ ಕಾಯಕ ತತ್ವದ ಬೆಳಕು.
ಅಂಬಿಗ ಚೌಡಯ್ಯಗಳಾ ಆತ್ಮದೀಪ್ತಿಯ ಬೆಳಕು.
ಅರಿವಿನ ಮಾರಿತಂದೆಗಳಾ ಅರಿವಿನ ಬೆಳಕು.
ಉರಿಲಿಂಗ ದೇವಗಳಾ ಶರಣಸತಿ-ಲಿಂಗಪತಿ ಭಾವ ಬೆಳಕು.
ಮೋಳಿಗಯ್ಯಗಳಾ ಶಾಂತ ಪ್ರಶಾಂತಗುಣ ಬೆಳಕು.
ನುಲಿಯ ಚಂದಯ್ಯಗಳಾ ಕಾಯಕ ಕಲಾ ಬೆಳಕು.

ಡೋಹರ ಕಕ್ಕಯ್ಯನಾ ಪ್ರಸಾದ ಶಕ್ತಿಯ ಬೆಳಕು.
ಮಾದಾರ ಚೆನ್ನಯ್ಯನಾ ನಿಜ ಭಕ್ತಿಯ ಬೆಳಕು.
ಮೇದಾರ ಕೇತಯ್ಯನಾ ನಿಶ್ಚಲ ಭಕ್ತಿಯ ಬೆಳಕು.
ಕುಂಬಾರ ಗುಂಡಯ್ಯನಾ ಭಾವ ಭಕ್ತಿಯ ಬೆಳಕು.
ನಾಗಲಾಂಬಿಕೆಯಾ ಗುರುಲಿಂಗ ಜಂಗಮ ಭಕ್ತಿಯ ಬೆಳಕು.
ವರದಾನಿ ಗುಡ್ಡಮ್ಮಗಳಾ ದಾನ ಭಕ್ತಿಯ ವೀರಶಕ್ತಿಯ ಬೆಳಕು.
ಮುಕ್ತಾಯಕ್ಕಗಳಾ ಮುಕ್ತಿರಹಸ್ಯದ ಅಜಗಣ್ಣನಾ ಭಕ್ತಿ ಬೆಳಕು.
ಲಕ್ಕಮ್ಮ ಪುಣ್ಯಾಂಗನೆಯಾ ಸಿದ್ಧಸಮಯ ಭಕ್ತಿಯ ನಿತ್ಯ ಸತ್ಯ ಬೆಳಕು.
ರೇಕಮ್ಮ ಪುಣ್ಯಾಂಗನೆಯಾ ಸಹಜ ಸಿದ್ಧಭಕ್ತಿಯ ಬೆಳಕು.
ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀರಮಣಿ ಗಂಗಮ್ಮನಾ
ಗಂಗಮ್ಮನಾ ಗಂಗೆ ಭಕ್ತಿಯ ಬೆಳಕು.
ಆಯ್ದಕ್ಕಿ ಮಾರಯ್ಯಗಳಾ ಧೃಢಭಕ್ತಿಯ ಬೆಳಕು.
ರೇವಣಸಿದ್ಧಯ್ಯಗಳಾ ಅಮೃತ ಸಿದ್ಧಿಯ ಬೆಳಕು.
ಮಲ್ಲಿಕಾರ್ಜುನ ಪಂಡಿತಾರಾಧ್ಯರಾ ಜ್ಞಾನ ಭಕ್ತಿಯ ಬೆಳಕು.
ಹಡಪದ ರೇಚಣ್ಣಗಳಾ ಚೆನ್ನ ಸೇವೆಯ ಬೆಳಕು.
ಚೆನ್ನಮಲ್ಲಿಕಾರ್ಜುನ ದೇವಗಳಾ ಕಲಿದೇವ ಭಕ್ತಿಯ ಬೆಳಕು.
ಹಡಪದಪ್ಪಣ್ಣಗಳಾ ಬಸವ ಭಕ್ತಿಯ ಬೆಳಕು.
ಪ್ರಸಾದಿ ಭೋಗಣ್ಣಗಳಾ ಪ್ರಸಾದ ಭಕ್ತಿಯ ಬೆಳಕು
ಸೊಡ್ಡಳ ಬಾಚರಸಗಳಾ ನಿತ್ಯ ಭಕ್ತಿಯ ಬೆಳಕು
ವೈದ್ಯ ಸಂಗಣ್ಣಗಳಾ ನಿತ್ಯ ನಿಜ ಭಕ್ತಿಯ ಬೆಳಕು.
ಕನ್ನದ ಮಾರಿ ತಂದೆಗಳಾ ದಿಟ್ಟ ಭಕ್ತಿಯ ಬೆಳಕು.
ಇಂತಿ ಭಕ್ತಿ ಜ್ಞಾನ ವೈರಾಗ್ಯಗಳಾ ತ್ರಿವೇಣಿ ಸಂಗಮ ಬೆಳಕು.
ದಶ ದಿಕ್ಕುಗಳ ಬೆಳಗಿ ಪ್ರಕಾಶಿಸುತಿರಲು,
ಮತ್ತೆ ಅಸಂಖ್ಯಾತ ಶರಣ ಶರಣೆಯರಾ ಶಿವಜ್ಞಾನ
ನಕ್ಷತ್ರಂಗಳಾ ವಜ್ರಸುಮ ಬೆಳಕು ಚೆಲ್ಲರಿದಿರಲು,
ಮಧ್ಯದಲಿ 'ಶೋಭಿಸುತಿರ್ದಾ" ಶೂನ್ಯಸಿಂಹಾಸನದಿ
ಸ್ವರ್ಣಕಮಲ ರತ್ನ ಪೀಠಾಲಂಕೃತನಾಗಿ ಬೆಳಗುತಿರ್ಪಾ
"ಅಲ್ಲಮಪ್ರಭು" ವಿನಾ ಆತ್ಮಜ್ಞಾನ ಪರಂಜ್ಯೋತಿ ಪ್ರಭಾ
ಕೋಟಿ ಕಿರಣಂಗಳಾ ಬಂಗಾರ ಹುಡಿ ಹಾರುತಿರಲು,
ಇಂತೀ ಮಹಾತೇಜಸ್ಸಿನಿಯಾ ಪ್ರಭಾವದೊಳ್
ಚತುರ್ದಶ ಭುವನಂಗಳಲ್ಲಿ ಬೆಳಗುವಡೆದು ಬೆಳಗುತ್ತಿದ್ದವು ನೋಡಾ!
ಇಂತಪ್ಪ ಪರಂಜ್ಯೋತಿ ಪ್ರಕಾಶವನೊಳಗೊಂಡು
ಬೆಳಗುತಿರ್ದಾ "ಶೂನ್ಯ ಸಿಂಹಾಸನ" ದ "ಶೂನ್ಯ ತತ್ವರಹಸ್ಯ"
ನೀವೆ ಹೇಳಾ ಶ್ರೀ ಶೈಲಮಲ್ಲಿಕಾರ್ಜುನ"!

# ವಿಜ್ಞಾನ ಮತ್ತು ಆಧ್ಯಾತ್ಮ

ಶ್ರೀ ಎಚ್.ಎಸ್. ನರಸಿಂಹಜೀಯರ್, ಲಕ್ಷ್ಮಯ್ಯ ಗಾರ್ಡನ್, 14ನೇ ಕ್ರಾಸ್, ಸೋಮೇಶ್ವರ
ತುಮಕೂರು-2

ನಮ್ಮ ರಾಷ್ಟ್ರದ ಅಧ್ಯಕ್ಷರಾಗಿದ್ದ ಹಾಗೂ ಪ್ರಪಂಚದ ಶ್ರೇಷ್ಠ ತತ್ವಜ್ಞಾ ಗಳಲ್ಲೊಬ್ಬರಾಗಿದ್ದ ಡಾ|| ಸರ್ವೆಪಲ್ಲಿ ರಾಧಾಕೃಷ್ಣನ್‌ರವರು ತಮ್ಮ 'Our herita ಎಂಬ ಗ್ರಂಥದಲ್ಲಿ ವಿಜ್ಞಾನ ಹೆಚ್ಚು ಬೆಳೆದಂತೆ ಮಾನವ ನಾಸ್ತಿಕ ವಾದದತ್ತ ವಾಲುತ್ತಿ ನೆಂಬುದನ್ನು ಈ ರೀತಿ ನುಡಿದಿದ್ದಾರೆ.

'Even to-day many People intoxicated by th triumph of science, repudiate the existence of God. A system of philosophy has come in to Vogue which says that nothing is true which is not empiricall Verifiable'. ಈಗಲೂ ಸಹ ಅನೇಕ ಮಂದಿ ವಿಜ್ಞಾನದ ಆವಿಷ್ಕಾರಗಳಿಂ ಮತ್ತರಾಗಿ ದೇವರಿಲ್ಲವೆಂದು ಜರಿಯುತ್ತಿದ್ದಾರೆ. ನಮ್ಮ ಇಂದ್ರಿಯಗಳ ಅನುಭವಕ್ಕೆ ಬಾರದಿರುವುದೆಲ್ಲಾ ಸುಳ್ಳೆಂಬ ಮನೋಭಾವನೆ ಬೆಳೆಯುತ್ತ ಬಂದಿದೆ ಎಂಬುದಾ ನೊಂದು ನುಡಿದಿದ್ದಾರೆ. ಈಗಿನ ಪರಿಸ್ಥಿತಿಯನ್ನು ನಾವು ಗಮನಿಸಿದಾಗ ಇದ ಅನುಭವದ ನುಡಿ ಅಕ್ಷರಶಃ ಸತ್ಯವಾಗಿದೆ. ಕೇವಲ ಇಹಲೋಕದ ಆಗು ಹೋಗ ಗಳನ್ನೇ ಪರಮ ಸುಖವೆಂದು ಭಾವಿಸಿ, ವಿಜ್ಞಾನವೇ ಸರ್ವಸ್ವವೆಂದು ತಿಳಿದಿರು ಬಹುಮಂದಿ ದೇವರೇ ಇಲ್ಲವೆಂಬ ಚಾರ್ವಾಕ ಸಿದ್ಧಾಂತ ಹೊಂದಿದ್ದಾರೆ.

ಇಂತಹವರಿಗೆ ಡಾ|| ರಾಧಾಕೃಷ್ಣರವರು ಕಿವಿಮಾತು ಹೇಳುತ್ತಾ 'W cannot see god with our intellectual speculation o hypothesis. We have to see God with an eye of th soul, an eye of the human spirit' ಆತ್ಮದ ಕಣ್ಣುಗಳಿಂದ, ಆಧ್ಯಾ ಚಕ್ಷುವಿನಿಂದ ದೇವರ ಇರುವಿಕೆ ಅರಿವಾಗುವುದೇ ವಿನಹ ಕೇವಲ ಬುದ್ಧಿವಂತಿ ಯಿಂದಾಗಲಿ, ತತ್ವ ಪ್ರತಿಪಾದನೆಯಿಂದಲ್ಲ ಎಂದು ಮಾರ್ಗದರ್ಶನ ಮಾಡಿದ್ದಾರೆ.

ದೇವರಿದ್ದಾನೆಯೇ ಇಲ್ಲವೇ ಎಂಬುದು ಒಂದು ಬಹು ಮುಖ್ಯವಾದ ಸಮಸ್ಯೆ ಈ ದಿಶೆಯಲ್ಲಿ ವಿಜ್ಞಾನವು ಏನಾದರೂ ಆವಿಷ್ಕಾರಗಳನ್ನು ನಡೆಸಿದೆಯೇ, ಇಂತಹ ಪ್ರಮುಖ ವಿಚಾರದಲ್ಲಿ ಹಿರಿಯ ವಿಜ್ಞಾನಿಗಳ ಅನುಭವವೇನು ಎಂಬುದನ್ನು ಪ್ರಸ್ತಾಪಿಸೋಣ.

ನಮ್ಮ ಭಾರತೀಯರಲ್ಲಿ ಪ್ರಸಿದ್ಧ ವಿಜ್ಞಾನಿಗಳಾಗಿದ್ದ ಡಾ|| ಜಗದೀಶಚಂದ್ರ ಬೋಸರು ಜೀವ ಜಡವಸ್ತುಗಳಲ್ಲಿ ಭೇದವಿಲ್ಲವೆಂಬುದನ್ನು ಪ್ರಯೋಗಮಾಡಿ ತೋರಿ

ರು. ಪ್ರಾಣಿಗಳಂತೆ ಸಸ್ಯಗಳೂ ಸಹ ನೋವು ನಲಿವುಗಳನ್ನು ಅನುಭವಿಸ ಬಲ್ಲವು ಬುದನ್ನು ಜಗತ್ತಿಗೆ ಅರಿವುಮಾಡಿಕೊಟ್ಟರು. ಇವರು It is forgotten at he, who sorrounded us with this ever evolving ystery of creation, the effable wonder that lies dden in the microcosom of the dust particle, enclo ng within its atomicform the mytery of the cosmos as also implanted in us the desire to question and nderstand'. ನಮ್ಮನ್ನು ಸುತ್ತುವರಿದಿರುವ ವಿಶ್ವದ ಪ್ರತಿಯೊಂದು ಕಣ ಕಣ ಲ್ಲಿಯೂ ರಹಸ್ಯವನ್ನು ತೋರಿಸುತ್ತಿರುವ ಅವನೇ (ಭಗವಂತ) ಅದನ್ನು ಅರಿ- ಯುವ ಕುತೂಹಲವನ್ನೂ ನಮ್ಮಲ್ಲಿ ಮೂಡಿಸಿದ್ದಾನೆ ಎಂಬ ವಾಕ್ಯ ಶ್ರೀ ಜಗದೀಶ ಚಂದ್ರಬೋಸರಿಗೆ ದೈವದ ಇರುವಿಕೆಯ ಅರಿವಿತ್ತು ಎಂಬುದು ನಮಗೆ ತಿಳಿದು ರುತ್ತದೆ

ಪಾಶ್ಚಾತ್ಯ ದೇಶದ ಪ್ರಸಿದ್ಧ ವಿಜ್ಞಾನಿ ಮೈಕೇಲ್‌ಫ್ಯಾರಡೆ ವಿದ್ಯುಚ್ಛಕ್ತಿ ಡುಹಿಡಿದು ಜಗತ್ತಿಗೆ ಕೊಡುಗೆಯಾಗಿ ಕೊಟ್ಟವರು. ಇವರು ಈ ಅದ್ಭುತ ಶಕ್ತಿ- ನ್ನು ಕಂಡು ಹಿಡಿದಾಗ ಈರೀತಿ ಹೇಳಿದ್ದಾರೆ" These are the glimm- ings we have of the second causes by what the ne great Cause works his ideas and governs the arth. The book of nature which we read is written by he finger of God. our science while it shows us hese things, should lead us to think of him who rought them" ಈ ಮಿಣುಕು (ವಿದ್ಯುಚ್ಛಕ್ತಿ)ಗಳೆಲ್ಲಾ; ಈ ವಿಶ್ವವನ್ನು ಆಳು ರುವ ಮೊದಲನೆ ಕಾರಣಕರ್ತನಾದ ಅವನ (ಭಗವಂತನ) ಎರಡನೆಯ ರೂಪಗಳು. ಕೃತಿಯೆಂಬ ಈ ಪುಸ್ತಕವನ್ನು ದೇವರು ತನ್ನ ಬೆರಳಿನಿಂದ ಬರೆದಿದ್ದಾನೆ. ವಿಜ್ಞಾನವು ವುಗಳನ್ನೆಲ್ಲಾ ತೋರಿಸುತ್ತಾ ಆ ಭಗವಂತನನ್ನು ಅರಿಯುವ ಕಡೆಗೆ ಕರೆದೊಯ್ಯಲಿ ಎಂದಿದ್ದಾರೆ. ಇವರ ಅಭಿಪ್ರಾಯದಲ್ಲಿಯೂ ಪರಮಾತ್ಮನೆಂಬ ವಿಶ್ವದ ಸೃಷ್ಟಿಗೆ ಕಾರಣನಾದ ಮಹಾನ್ ಶಕ್ತಿ ಇದೆ ಎಂಬುದು ನಮಗೆ ವ್ಯಕ್ತವಾಗುತ್ತದೆ.

ಇತ್ತೀಚಿನ ಸಂಶೋಧನೆಗಳಿಂದ ಆ ಶಕ್ತಿಯ ಬಗ್ಗೆ ಇನ್ನೂ ಹೆಚ್ಚಿನ ಅರಿವು ಜ್ಞಾನಿಗಳಿಗೆ ಬರುತ್ತಿದೆ. ಪ್ರಸಿದ್ಧ ಭೌತ ವಿಜ್ಞಾನಿ ಡಾ|| ರೋಜರ್‌ಜೋನ್ಸ್ ಂಬುವರು In Quantam mechanics the Consciousness has een brought in to the picture" ಎಂದಿದ್ದಾರೆ. ಕ್ವಾಟಂಥಿಯರಿ

ನಂತರ ಜಡವಾದ ವಸ್ತುಗಳಲ್ಲಿಯೂ "ತಿಳುವಳಿಕೆ" Consciousness) ಎಂಬುದನ್ನು ಮೊದಲಬಾರಿಗೆ ಗುರ್ತಿಸಲಾಗಿದೆ. ಮತ್ತೊಬ್ಬ ಭೌತ ವಿಜ್ಞಾ ಡಾ|| ಇ. ಎಚ್. ವಾಕರ್ ಎಂಬುವರು " That protons inside atom show signs of Consciousness. According these physicists, matter as its core is energy ( which, unlike insentient electricity, shows at sub atomic level, an inteligent design in-its worki Protons appear to possess information and act acc dingly like an organic cell ಎಂದಿದ್ದಾರೆ. ಕಲ್ಲುಮಣ್ಣುಗಳ ನಾವು ಭಾವಿಸಿರುವ ಎಲ್ಲಾ ಜಡವಸ್ತುಗಳ ಪ್ರತಿಯೊಂದು ಅಣುವಿನಲ್ಲಿ ಪ್ರೋಟಾನ್‌ನಲ್ಲಿಯೂ ಶಕ್ತಿಯನ್ನು ಗುರ್ತಿಸಲಾಗಿದೆ.

ಈ ಶಕ್ತಿಯು ಕೇವಲ ಬುದ್ಧಿರಹಿತವಾದ ನಾವು ಉಪಯೋಗಿಸುವ ವಿದ್ಯುತ್ ಯಂತಲ್ಲ. ಈ ಶಕ್ತಿಯಲ್ಲಿ ತಿಳುವಳಿಕೆ ಇರುವುದು ಕಂಡು ಬಂದಿದೆ.

ಅಂದರೆ ಇಡೀ ವಿಶ್ವದ ಪ್ರತಿಯೊಂದು ಕಣಕಣದಲ್ಲಿಯೂ ಅತ್ಯಂತ ಪ್ರಜ್ಞೆಯ ಶಕ್ತಿ ಅಡಗಿರುವುದು ಕ್ವಾಂಟಂಥಿಯರಿ ಮತ್ತು ರಿಲೇಟಿವ್‌ಥಿಯರಿ ಕಂಡು ಹಿಡಿದನಂ ಜಗತ್ತಿಗೆ ಅರಿವಾಗಿದೆ ಎಂಬುದನ್ನು ಈ ವಿಜ್ಞಾನಿಗಳು ತೋರಿಸಿಕೊಟ್ಟಿದ್ದಾರೆ.

ಡಾ|| ರೋಜರ್ ಜೋನ್ಸ್ ಮತ್ತು ಡಾ|| ಇ. ಎಚ್. ವಾಕರ್‌ರವರ ಪ್ರಾಯವು ನಮ್ಮ ವೇದಾಂತದ "ಈಶ್ವರ ಸರ್ವಭೂತಾನಾಂ"; ವಿಶ್ವದ ಪ್ರತಿಯೊಂ ರಲ್ಲಿಯೂ ಭಗವಂತನಿದ್ದಾನೆ ಎಂಬ ಸಿದ್ಧಾಂತಕ್ಕೆ ಹೋಲಿಕೆ ಇರುವುದನ್ನು ನಾ ಗಮನಿಸಬಹುದಾಗಿದೆ.

ಡಾ|| ಗಂಗೂಲಿ ಹಾಗೂ ಇತರೆ ವಿಜ್ಞಾನಿಗಳ ಅಭಿಪ್ರಾಯ ಈ ರೀತಿ The Relative theory too leads the conclusion th Conseiousness is the basic stuff of the univers ಇಡೀ ವಿಶ್ವದ ಆಧಾರವೇ ಈ "ಸ್ವಪ್ರಜ್ಞತೆ" ಎಂಬ ತೀರ್ಮಾನದ ಕಡೆಗೆ ರಿಲೇಟಿ ಥಿಯರಿ ನಮ್ಮನ್ನುಕರೆದೊಯ್ಯುತ್ತದೆ ಎಂದಿದ್ದಾರೆ.

ಪ್ರಸಿದ್ಧ ವಿಜ್ಞಾನಿಗಳೆಲ್ಲಾ, ಈ ಜಗತ್ತಿನ ಸೃಷ್ಟಿ ಸ್ಥಿತಿಗಳಿಗೆ ಒಂದು ಅತ್ಯದ ಸ್ವಪ್ರಜ್ಞೆಯ ಶಕ್ತಿ ಕಾರಣವಾಗಿದೆ ಎಂಬುದನ್ನು ಅರಿತಿದ್ದಾರೆ ಹಾಗೂ ಅರಿ ತ್ತಿದ್ದಾರೆ. ಮತ್ತೆ ಕೆಲವು ವಿಜ್ಞಾನಿಗಳ ಅಭಿಪ್ರಾಯವನ್ನು ಮುಂದಿನ ಸಂಚಿಕೆಯ ಪ್ರಸ್ತಾಪಿಸೋಣ.

# ವಚನ ಪರಂಪರೆಯ ಹಿನ್ನೆಲೆಯಲ್ಲಿ ಆಧುನಿಕ ವಚನಕಾರ ಮಹದೇವ ಬಣಕಾರರ ವಚನಗಳು.

ಬಿ. ಸಿ. ವೀರಪ್ಪ, ಬೈಯಂಡನಹಳ್ಳಿ, ಬೆಂಗಳೂರು ದಕ್ಷಿಣ॥ತಾ॥

15-16 ನೇ ಶತಮಾನದವರೆಗೂ ಪ್ರಖರವಾಗಿ ಮುನ್ನಡೆದ ಸಾಹಿತ್ಯ ಚಳುವಳಿಯು 17-18-19 ನೆಯ ಶತಮಾನಗಳಲ್ಲಿ ಮಂದಗತಿಯಲ್ಲಿ ಮುನ್ನಡೆಯಿತು. ತಾತ್ಕಾಲಿಕವಾಗಿ ಸ್ಥಗಿತಗೊಂಡಿದ್ದ ವಚನಸಾಹಿತ್ಯದ ಪ್ರವಾಹ 20ನೆಯ ಶತಮಾನದ ಆಧುನಿಕ ಯುಗದಲ್ಲಿ ನಿರಾತಂಕವಾಗಿ ಹರಿಯತೊಡಗಿತು. ಇದುವರೆಗೂ ಹೆಚ್ಚಿನಮಟ್ಟಿಗೆ ಶಿವಶಕ್ತಿಪಂಥದ ಶರಣರೇ ಮುಂದುವರೆಸಿಕೊಂಡು ಬಂದಿದ್ದ ವಚನಪರಂಪರೆಗೆ ವೀರಶೈವೇತರರೂ ತಮ್ಮ ಕೈಜೋಡಿಸಿದುದು ಗಮನಾರ್ಹ ಸಂಗತಿ. ಈ ದೃಷ್ಟಿಯಿಂದ ಹೆಸರಿಸಬಹುದಾದ ಆಧುನಿಕ ವಚನಕಾರರೆಂದರೆ:- ಎಸ್.ವಿ. ರಂಗಣ್ಣ. ಬೇಂದ್ರೆ ಕುವೆಂಪು. ತೀ. ನಂ. ಶ್ರೀ. ಎಸ್. ವಿ. ಪರಮೇಶ್ವರಭಟ್ಟ. ಆರ್. ಆರ್. ದಿವಾಕರ್ ಮುಂತಾದವರು. ಇದೇ ಸಾಲಿನಲ್ಲಿ ಬಂದ ಬಸವಾದಿ ಪ್ರಮಥರನ್ನೇ ಅನುಸರಿಸಿದ ಪ್ರಮುಖ ವಚನಕಾರರೆಂದರೆ: ಡಾ॥ ಜ. ಚ ನಿ. ಡಾ॥ ಸಿದ್ಧಯ್ಯ ಪುರಾಣಿಕ್, ಸಿಂಪಿ ಲಿಂಗಣ್ಣ, ಜೀರಿಗೆಕಟ್ಟೆ ಬಸಪ್ಪ, ಜೋಳದರಾಶಿ ದೊಡ್ಡನಗೌಡ, ಎ.ಜಿ. ನಂಜುಂಡಾರಾಧ್ಯ ಶಂಕರಮ್ಮ, ಶಿ. ಶು. ಸಂಗಮೇಶ, ಪ್ರೊ. ಸಂಗಮೇಶ ಹಂಡಗಿ. ಮೊದಲಾದವರು ಅಂದಿನಿಂದ ಇಂದಿನವರೆಗೆ ಸುಮಾರು ಹತ್ತು ಶತಮಾನಗಳಷ್ಟು ದೀರ್ಘಕಾಲ ಹರಿದು ಬಂದಿರುವ ಈ ವಚನ ಪ್ರವಾಹದಲ್ಲಿ ಐನೂರಕ್ಕು ಮಿಕ್ಕು ವಚನಕಾರರು ತಮ್ಮ ಸಾಹಿತ್ಯ ಕೃಷಿ ನಡೆಸಿದ್ದಾರೆ. ಇತ್ತೀಚಿನ ಆಧುನಿಕ ಶ್ರೇಷ್ಠ ವಚನಕಾರರ ಸಾಲಿನಲ್ಲಿ ಒಬ್ಬರಾದ ಶ್ರೀ ಮಹದೇವ ಬಣಕಾರರ ವಚನಸಾಹಿತ್ಯದ ಪರಿಚಯವೇ ಪ್ರಸ್ತುತ ಪ್ರಬಂಧದ ಮುಖ್ಯ ಉದ್ದೇಶ.

ಬಣಕಾರರ ಸಾಹಿತ್ತಿಕಕೃಷಿ ಬರಿ ವಚನ ಸಾಹಿತ್ಯಕ್ಕೆ ಮಾತ್ರ ಸೀಮಿತವಾದುದಲ್ಲ. ಆಧುನಿಕ ಕನ್ನಡ ಸಾಹಿತ್ಯ ಸೀಮೆಯಲ್ಲಿ ಪ್ರಚಲಿತ ಪ್ರಕಾರಗಳಾಗಿರುವ ಕವನ. ಕಥೆ. ಕಾದಂಬರಿ, ನಾಟಕ, ಪ್ರಬಂಧ, ಜೀವನಚರಿತ್ರೆ, ಸಂಶೋಧನೆ, ಮಹಾಕಾವ್ಯ ಈ ಎಲ್ಲ ವಲಯಗಳು ಇವರ ಲೇಖನಿಗೆ ಪರಿಚಿತವೆ. ಹತ್ತು ದಿಕ್ಕುಗಳಲ್ಲಿ ಹರಿದು ಬಂದಿರುವ

ಮಹದೇವ ಬಣಕಾರರ ಕಾವ್ಯ ವಾಹಿನಿಯಲ್ಲಿ ಹೆಸರಿಸಬೇಕಾದ ಮೂರುಮುಖ್ಯ ಹಿರಿಯಕೃತಿಗಳೆಂದರೆ 1) ಮರುಳಸಿದ್ಧ ಮಹಾಕಾವ್ಯ. 2) ಆಂಗ್ಲರ ಆಡಳಿತದಲ್ಲಿ ಕನ್ನಡ 3) ಮಹದೇವ ಬಣಕಾರರ ವಚನಗಳು. ಶ್ರೀಯುತರು ವಚನ ಸಾಹಿತ್ಯದಿಂದ ಸಾಕಷ್ಟು ಪ್ರಭಾವಿತರಾಗಿ "1108 ಪ್ರೌಢ ವಚನಗಳನ್ನುಳ್ಳ ಮಹಾದೇವಬಣಕಾರರ ವಚನಗಳು" ಎಂಬ ಬೃಹತ್‌ಕೃತಿಯನ್ನು ರಚಿಸಿದ್ದಾರೆ. ಕನ್ನಡಸಾಹಿತ್ಯ ವಲಯದಲಿ ಸತ್ವ ಮತ್ತು ಗಾತ್ರಗಳ ದೃಷ್ಟಿಯಿಂದ ಈ ಕೃತಿ ಯಾವುದೇ ಶ್ರೇಷ್ಠ ಕೃತಿಗಳಿಗೂ ಸರಿಸಾಟಿಯಾಗಿಲಾದುದು ಎಂದರೆ ಅತಿಶಯೋಕ್ತಿಯೇನಲ್ಲ.

ಇಲ್ಲಿ ಬರುವ ವಚನಾ ಕ್ರಮವನ್ನು ಎರಡು ಬಗೆಯಾಗಿ ಗುರುತಿಸಬಹುದ 1) ಸಾಂದರ್ಭಿಕ ರಚನೆ 2) ಪರಿವಿಡಿ ರಚನೆ. ಸಾಂದರ್ಭಿಕ ರಚನೆಯಲ್ಲಿ ವಚನಗಳ ಸಂದರ್ಭ, ಸನ್ನಿವೇಶ ಹಾಗೂ ಸಮಯ ಸ್ಫೂರ್ತಿಯ ಹಿನ್ನೆಲೆಯಲ್ಲಿ ರಚಿತವಾಗಿರುತ್ತ ಆದರೆ ಪರಿವಿಡಿ ರಚನೆಯಲ್ಲಿ ವಚನಗಳು ಲಿಂಗವಂತ ಲಕ್ಷಣಗಳಾದ ಅಷ್ಟಾವರಣ ಪಂಚಾಚಾರ, ಷಟ್‌ಸ್ಥಲಗಳ ಭೌತಿಕ ಹಿನ್ನೆಲೆಯಲ್ಲಿ ರಚಿತವಾಗಿರುತ್ತವೆ. ಇಲ್ಲಿ ಶಿ ಜೀವ-ಜಗತ್ತು. ಮಾಯೆ, ಆಚಾರ,-ವಿಚಾರ, ಪುರಸ್ಕಾರ-ತಿರಸ್ಕಾರ (ಖಂಡನೆ ಇತ್ಯಾದಿಗಳಿರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಣಕಾರರು ತಮ್ಮ ವಚನಗಳ ಎರಡನೇ ಬಗೆಯ ಪರಿವಿಡಿ ರಚನೆಗೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದು ಎದ ಕಾಣುವ ಸಂಗತಿ.

ಬಣಕಾರರ ಬಹುತೇಕ ವಚನಗಳಲ್ಲಿ ಎದ್ದುಕಾಣುವ ಪ್ರಧಾನ ಅಂಶ ಜ ಸಾಮಾನ್ಯರ ದಿನನಿತ್ಯದ ಬದುಕು. ಎಲ್ಲ ವಚನಗಳಲ್ಲು ಒಂದಿಲ್ಲೊಂದು ಲೋಕ ಡೊಂಕನ್ನು ತಿದ್ದುವ ಕಾರ್ಯ ನಡೆದಿದೆ. ಹಾಗಾಗಿ ಇಲ್ಲಿನ ವಚನಗಳಲ್ಲಿ ಯಾವುದ ಮುಖ್ಯ ಯಾವುದು ಅಮುಖ್ಯ ಎಂಬ ಪ್ರಶ್ನೆಯೇ ಏಳುವುದಿಲ್ಲ. ಇಲ್ಲಿನ ಸೀಮಿ ಲೇಖನದಲ್ಲಿ ಕೆಲವಾರು ವಚನಗಳನ್ನು ಮಾತ್ರ ಆರಿಸಿಕೊಂಡು ಅವು ಇಂದಿ ವೈಜ್ಞಾನಿಕ ಪ್ರಪಂಚದಲ್ಲೂ ಕೂಡ ಜನಮನವನ್ನು ಹೇಗೆ ಹಿಡಿಯಬಲ್ಲವು ಎಂಬ ಸಂಕ್ಷಿಪ್ತ ವಿಶ್ಲೇಷಣೆಗೆ ಪ್ರಯತ್ನಿಸಲಾಗಿದೆ. ತುಣುಕುಮಾತಿನಲಿ ಮಿಂಚಿನಂತಹ ಅರ್ಥ ಕಲ್ಪಿಸುವ ಅವರ ಕರಗತ ಕಲೆಗೆ, ವಿಶ್ಲೇಷಣೆ ಅನಗತ್ಯ ಎಂಬ ಸರಳ ಸತ್ಯ ಅವ ವಚನಗಳನ್ನು ಓದಿದ ಯಾರಿಗೆ ಆದರೂ ಅನ್ನಿಸದಿರದು.

ಲೋಕದ ಬದುಕಿನಲ್ಲಿ ಆವರಿಸಿರುವ ಅರಿಷಡ್ವರ್ಗಗಳ ಬಲೆಯೊಳಗೆ ಸಿಲುಕಿ ಸ್ಥಿತಿ, ಹಾಗೂ ಆಸೆ ಆಮಿಷಗಳೆಂಬ ಮೌಢ್ಯದ ಪೊರೆಯೊಳಗೆ ವಿಲಿವಿಲಿ ಒದ್ದಾಡುವ ಮನುಜರ ನೈಜ ಚಿತ್ರಣವನ್ನು ಸಹಜವಾಗಿ ಓದುಗರ ಮುಂದಿರಿಸುತ್ತಾರೆ.

"ಮಾಯೆಯೆಂಬುದ ತೋರಬಂದವರಾರು ?
ಭಕ್ತರಿಗೆ ಆಶೆಹುಟ್ಟುವುದೇ ಮಾಯೆ,
ವಿರಕ್ತಂಗೆ ವಿಷಯಾಸಕ್ತಿ ಮೈದೋರುವುದೇ ಮಾಯೆ,
ದಾಸೋಹಿ ಧನದಾಸೆಗೊಳಗಾಗುವುದೇ ಮಾಯೆ,
ಅನುಭಾವಿ ಅಂಗಸಂಗಿಯಾಗುವುದೇ ಮಾಯೆ,
ಲಿಂಗಾಂಗಿ ಮೋಹಿಯಪ್ಪುದೇ ಮಾಯೆ,
ಜಂಗಮ ಪ್ರೇಮಿ ಅಜ್ಞಾನಕೊಳಗಾಗುವುದೇ ಮಾಯೆ,
ಪ್ರಸಾದಿ ಪರಿಣಾಮಕ್ಕೆ........................"

ಇಲ್ಲಿ ಬರುವ ಎಲ್ಲ ವ್ಯಕ್ತಿಗಳು ಶರಣ ಪರಿಕಲ್ಪನೆಯ ಹಿನ್ನೆಲೆಯುಳ್ಳವೆ ಆದರೂ ಮಾಯೆಯ ಸ್ವರೂಪ ತುಂಬ ಮುಖ್ಯ "ಮಾಯೆ" ಎಂಬ ಶಬ್ದದ ಅರ್ಥವನ್ನು ಅನಿತ್ಯ ಅವರವರು ಮಾಡುವ ಬದುಕಿನೊಳಗೆ ನುಸುಳಿಬರುವ ಅನಾಚಾರಗಳ ಆಕರ ಎನ್ನುತ್ತಾರೆ. ಇಂತಹ ಕ್ಲಿಷ್ಟಕರವಾದ ಮಾತನ್ನು ತೀರಾ ಸರಳವಾಗಿ ಸಾಮಾ ರಲ್ಲಿ ಸಾಮಾನ್ಯರಿಗೂ ಮನಮುಟ್ಟುವಂತೆ ಹೇಳುವುದೆ ಬಣಕಾರರ ಮೋಡಿ.

ಮಾನವರ ಬದುಕಿನಲ್ಲಿ ಅಜ್ಞಾನ, ಸುಜ್ಞಾನಗಳೆಂಬ ಎರಡು ಪ್ರಭೇದ ಉಂಟು, ವೈಜ್ಞಾನಿಕವಾಗಿಯೂ ಕೂಡ ಮಾನವ ಸಹಜ ಬುದ್ಧಿಗೆ ಒಳಿತು-ಕೆಡಕುಗಳ ನಡುವಿನ ಮಾನಸಿಕ ಹೋರಾಟ ನಡೆಯುವುದು ಕಾಲ್ಪನಿಕವಲ್ಲ. ಅಂತಹ ಮನ-ಸ್ಥಿತಿಯುಗೊಂದಲವೆಂತಹದೆಂಬುದಕ್ಕೆ ಈ ವಚನವನ್ನು ನೋಡಿ.

"ಸಕ್ಕರೆಯ ಮೂಟೆಯು ಬಳಿಯಿದ್ದ ಮೂಷಿಕವು,
ಬೆಕ್ಕಿಂಗೆ ಭಯಗೊಂಡು ಹೊರಗಣ ಹುತ್ತವ ಹೊಕ್ಕಂತೆ,
ಎತ್ತಣ ಮಾರ್ಗವಯ್ಯ ಎನ್ನ ಇರುವಿಂಗೆ?
ಒಳಗಣ ಸರ್ಪ, ಹೊರಗಣ ಬೆಕ್ಕು,
ಬದುಕುವ ಬಗೆಯೆಂತು ಹೇಳಾ?
ಕೆಟ್ಟೆನಯ್ಯ ಭವಕ್ಕೆ ಬಂದು;
ಹುಟ್ಟಿತ್ತೆ ತಪ್ಪಾಯಿತೆಂಬೆ......................

ನೆಳಲು–ಬೆಳಕಿನ ಚೆಲ್ಲಾಟದ ಈ ಬದುಕು ಒಂದೆಡೆ ಬೆಕ್ಕು, ಮತ್ತೊಂದೆಡೆ ಹಾವಿನ ನಡುವಿರುವ ಇಲಿಯ ರೀತಿ, 'ಅತ್ತದರಿ, ಇತ್ತ ಪುಲಿ!' ಇಂತಹ ಸ್ಥಿತಿಯ ಬದುಕಿನಲ್ಲಿ ಸಂಕಟಗಳ ದ್ವಂದ್ವ ಅನಿವಾರ್ಯ ಅವುಗಳಿಂದ ಮುಕ್ತಿ ಪಡೆ-ಯಲು ಅನುದಿನದ ಹೋರಾಟ ಹೇಗಿರುತ್ತದೆಂದು ತುಂಬ ಚೆನ್ನಾಗಿ ಚಿತ್ರಿಸಿದ್ದಾರೆ.

ಮಾನವರ ಜೀವನ ನಶ್ವರವಾದುದು, ಅದು ನಾಯಿಯ ತಲೆಯಮೇಲಿನ ಬುತ್ತಿಯಂತೆ. ಇಂತಹ ನಶ್ವರ ಜೀವನದಲ್ಲು ಜೀವ ಶಾಶ್ವತತೆಯನ್ನು ಕಾಪಾಡಿ ಕೊಳ್ಳಲು ಸದಾ ಹೋರಾಡುತ್ತದೆ. ಇಹ-ಪರಗಳೆರಡನ್ನು ಚಿಂತಿಸಿ ಸುಖಿಸಬಯಸುವ ಹಂಬಲವೆಂತಹುದು ಎಂಬುದಕ್ಕೆ ಮುಂದಿನ ವಚನವೆ ಸಾಕ್ಷಿ.

"ಕುದುರೆಗಳೆರಡರ ಮೇಲೆ ಕಾಲನಿರಿಸಿ,
ಪಯಣಗೈಯ್ಯುವ ಪರಿಯುಂತಯ್ಯಾ ಎನ್ನಭಕ್ತ
ಇಹದಾಸೆ ಬಿಡದು-ಪರದಾಸೆ ದೊರೆಯದು,
ದಾರಿಯಾವುದೋ ಊರಾವುದೋ?
ಪಯಣದ ಪರ್ಯವಸಾನವೆಲ್ಲಿಯದೊ?
ಕಡಿವಾಣವ ಹಿಡಿದೊಡೇನು?
ಕುದುರೆಗಳು ಕೆಡೆವದಿರ್ಪುವೇನು ಹೇಳಾ ..........."

ಒಂದು ಕುದುರೆಯ ಮೇಲೆ ನಾಗಾಲೋಟಕ್ಕೆ ಹೊರಟವನೆ ಸಕಲಸೂತ್ರಗಳ
ಭದ್ರವಾಗಿ ಹಿಡಿದು ಕುಳಿತಿರಬೇಕು. ಹೀಗಿರುವಾಗ ಅಶ್ವದ್ವಯಗಳ ಮೇಲೆಬಂದೊ
ಕಾಲಿರಿಸಿ ಕಡಿವಾಣವಿಡಿದು ಜಗ್ಗಿದರೆ ಅವನು ಬೀಳದಿರಲು ಭರವಸೆಯಾವದು ಏನ

ಪಂಚತಂತ್ರದ ಕಥೆಗಳಲ್ಲಿ ಬರುವಂತೆ ಮಾನವನ ಬದುಕಿಗೆ ಆರೋಪವ
ಪ್ರಾಣಿಕಲ್ಪನೆಯು ಅನೇಕ ದೃಷ್ಟಾಂತಗಳನ್ನು ತಮ್ಮ ವಚನಗಳಲ್ಲಿ ರೂಢಿಸಿಕೊಂಡಿದ

"ಬೇಟೆಯ ಕಲಿಸುವ ಬೆಕ್ಕು
ಇಲಿಯ ತಂದದರ ಕಂಗಳ ಕಳೆದು,
ತನ್ನ ಮರಿಯನಾಡಿಸುವಂತೆ;
ಪಂಚೇಂದ್ರಿಯಗಳೆನ್ನ
ಅರುಹ ಕಳೆದು, ಮರೆವಿನೊಳಗಾಡಿಸುತ್ತಿಹವಯ್ಯಾ;
ಬಟ್ಟೆಗಾಣದು; ಬನ್ನಗಾಣದು;
ಮುಂದಣಗತಿ ಆವುದಯ್ಯಾ................."

ಇಲ್ಲಿ ಮಾನವನ ಜೀವಂತಿಕೆಯ ಮೇಲ್ಮೈ ಲಕ್ಷಣಗಳತಿಂರುವ ಪಂಚೇ
ಯಗಳ ಮುಂದೆ ಅವನ ಬದುಕಿಗೆ ಹೇಗೆ ಮಾರಕವಾಗುತ್ತವೆ ಎಂಬುವನ್ನು ಚಿತ್ರಿ
ಲಾಗಿದೆ. ಮನೆಗೆ ಕಿಟಕಿ—ಬಾಗಿಲುಗಳಿದ್ದೂ, ಗಾಳಿ-ಬೆಳಕನ್ನು ನೀಡದೇ ಇರು
ಸ್ಥಿತಿಯನ್ನು ಮೇಲಿನ ಮಾತುಗಳು ನೆನಪಿಗೆ ತರುತ್ತವೆ.

ಅಳಿಮನದ, ಆಡಂಬರದ, ಡಾಂಭಿಕ ಪ್ರವೃತ್ತಿಯ ಭಕ್ತರ ರೀತಿಯನ್ನು ತವ
ಚುಚ್ಚು ಮಾತುಗಳಿಂದ ಬಣಕಾರರು ಎಚ್ಚರಿಸಿರುವ ರೀತಿ ಹೀಗಿದೆ–

"ಅಳಿಮನದವನ ಭಕ್ತಿ ಬೇಯದ ಬಿಂದಿಗೆಯಲ್ಲಿ ನೀರ ತುಂಬಿದಂತೆ.
ಆಳಿಮನದವನ ಭಕ್ತಿ ಮುಂಡೆ ತನ್ನ ಜಡೆಯ ಮರೆತು ಹೂವಿನ ದಂಡೆಯ ಕೊಂಬ
ಅಳಿಮನದವನ ಭಕ್ತಿ ಬಂಜೆ ಬೇನೆಯ ಕನಸು ಕಂಡು ಜೋಗುಳವ ಪಾಡಿದಂತೆ"

ಮೇಲಿನ ಮಾತುಗಳು ನೋಟಕ್ಕೆ ಎಷ್ಟು ಕಠೋರವೋ ಅಂತಹ ಅಳಿಮನ
ನೀತಿಯುಳ್ಳ ಸಮಾಜ ಇರುವುದು ಅಷ್ಟೆ ಕಟುಸತ್ಯ. ಇಲ್ಲಿ ಟೊಳ್ಳು ಮನಸ್ಸಿನ ಜಳ
ಭಕ್ತಿಗಿಂತ, ತುಂಬು ನಿಷ್ಠೆಯ ದೃಢ ಮನಸ್ಸು ಅಗತ್ಯವೆಂಬ ಮಾತನ್ನು ಸಾರುತ್ತಾರೆ.

ನಮ್ಮ ಸಮಾಜದಲ್ಲಿ ಅನೇಕ ಮಂದಿ ತಾವು ಮಾಡಿದ ಅಲ್ಪ ಸೇವೆಗಳಿಂದಾಗಿ
ತಾವೇ ಮಹಾತ್ಮರು ಎಂಬ ಭವ್ಯ ಸೋಗನ್ನು ಹಾಕುತ್ತಾರೆ. ಸೇವೆಯ ನಿಮಿತ್ತ
ಕಾರಣ-ಕರ್ತರಾದರೂ, ಸೋಗು ಹಾಕುವುದು ಕೇವಲ ಕಾಲ್ಪನಿಕವಾದ ಒಂದ
ರೀತಿಯ ಕ್ಷಣಿಕಭ್ರಮೆ ಎಂಬ ಅರಿವು ಅವರಿಗಿರುವುದಿಲ್ಲ. ಅದಕ್ಕೊಂದು ಉತ್ತಮ
ದೃಷ್ಟಾಂತವಾಗಿ ಈ ವಚನವನ್ನು ನೋಡಬಹುದು.

ಬೆಟ್ಟದ ತಳಗೊಂದು ಮೂಷಿಕವು ಮನೆಯ ಮಾಡಿ,
ಬೆಟ್ಟದ ಭಾರವನೆ ಹೊತ್ತಿಹೆನೆಂದು ಭಾವಿಸಿತ್ತು ;
ವಾಹನದ ಮೇಲಿದ್ದ ನೊಣವು, ಹಿಂದೆ ಹೇಳುವಧೂಳು
ತನ್ನ ಭಾರದಿಂದಲೇ ಎಂದು ಭಾವಿಸಿತ್ತು ;
ಕಪ್ಪುರದ ಕಂತೆಯನ್ನಿಟ್ಟು ಲಿಂಗವ ಮಾಡಿದ ಜಂಗಮನು
ಲಿಂಗ ಸೃಷ್ಟಿಗೆ ತಾನೇ ಕರ್ತವೆನಿಸಿತ್ತು ;
ಒಡವೆಯ ಮಾಡಿದ ಅಕ್ಕಸಾಲಿಗ ಒಡವೆಯನಲ್ಲದೆ
ಕಡವರವ ಮಾಡನು ನೋಡಾ ;...............

ಅಕ್ಕಸಾಲಿಗನೊಬ್ಬ ಬಂಗಾರ ಕೊಟ್ಟರೆ ಬೇಕಾದ ಒಡವೆಗಳನ್ನು ಮಾಡಬಲ್ಲನೆ ಹೊರತು ಬರಗಾರವನ್ನೆ ಮಾಡಲು ಸಾಧ್ಯವೆ? ಇಲ್ಲಿ ಬರುವ ಬೆಟ್ಟ-ಮೂಷಿಕ, ನೊಣ-ಧೂಳು, ಲಿಂಗ-ಜಂಗಮ ಇತ್ಯಾದಿ ಹೋಲಿಕೆಗಳಲ್ಲಿ, ನಾನು ಎಂಬ ಅಹಂ ಭಾವದ ಕೀಳರಿಮೆಯನ್ನು ಬಣಕಾರರು ಸಾದೃಶ್ಯದೃಷ್ಟಾಂತಗಳ ಮೂಲಕ ಓದುಗರಿಗೆ ಅರಿವು ಮಾಡಿಕೊಡುತ್ತಾರೆ.

ನಮ್ಮ ಜೀವನದ ಎಲ್ಲ ಮಜಲುಗಳಲ್ಲು ಹತ್ತಿರುವ ಕಿಲುಬನ್ನು ತೊಳೆಯುವ ಪ್ರಾಮಾಣಿಕ ಪ್ರಯತ್ನ ಬಣಕಾರರದು, ಸಮಾಜದಲ್ಲಿ ಒಳ್ಳೆಯ ಭಾವನೆಗಳಿಗೆ ಚಾಲನೆ ನೀಡುತ್ತಿ, ಅವುಗಳಿಗೆ ಪುಟವಿಕ್ಕಿ ಹೊಳಪನ್ನು ನೀಡುವ ಕೆಲಸವನ್ನು ಮಾಡಿದ್ದಾರೆ.

"ಬಡವನ ಮಗುವಿಗೆ ಬಂಗಾರಿಯೆಂದೊಡೆ
ಸಂದಿತ್ತೇನು ಹೇಳಾ ಸಿರಿವಂತಿಕೆ ?
ಕಪ್ಪುಳ್ಳ ಹೆಣ್ಣಿಂಗೆ ಕೆಂಪಮ್ಮನೆಂದೊಡೆ,
ಕೆಂದಾವರೆಯಾಯಿತ್ತೆ ಅವಳಮುಖ ಮುದ್ರಿಕೆ ?
ಒಡಲ ಕಿಚ್ಚಿಗೆ ಕುದಿವ ಡಾಂಬಿಕಂಗೆ...........
ಭಕ್ತನೆಂದರೆ ಬಟ್ಟಿತ್ತೆ ಭವಪಾಶ ..............
.........................................."

ಒಂದೆಡೆ ಜನಸಾಮಾನ್ಯರಲ್ಲಿ ಕಾಣುವ ರೂಪ, ಬಣ್ಣ, ಬೆಡಗು, ಸಿರಿವಂತಿಕೆಗಳೆಂಬ ಕ್ಷುಲ್ಲಕ ಕಲ್ಪನೆಗಳು ಮನೆ ಮಾಡಿರುವುದನ್ನು ವಿಶ್ಲೇಷಿಸಿದರೆ; ಮತ್ತೊಂದೆಡೆ ಸದಾ ವೈರಾಗ್ಯಪರರಾದ, ಶಿಷ್ಟಾಚಾರ:,ಹೋಮ ನೇಮಗಳಲ್ಲಿ ಮುಳುಗಿದ ದೃಢಮನಸ್ಸಿಲ್ಲದ ಚಂಚಲ ಭಕ್ತರ ಡಾಂಬಿಕ ನಡವಳಿಕೆಯನ್ನು ವಿಡಂಬಿಸುತ್ತಾರೆ. ಈ ಮಾತುಗಳಿಗೆ ಇಂಬುಕೊಡುವ ಮತ್ತೊಂದುವಚನವನ್ನು ನೋಡಿದರೆ ಮೇಲಿನಹೇಳಿಕೆಗೆ ಮತ್ತೊಷ್ಟು ಪುಷ್ಟಿ ನೀಡಿದಂತಾಗುತ್ತದೆ.

ಮರವ ಸುತ್ತುವುದು ಇಣಚಿಯ ಕೆಲಸ,
ನೀರಲಿ ಮುಳುಗುವುದು ಕಪ್ಪೆಯ ಕೆಲಸ,
ಮುಡಿಯ ಬಿಡುವುದು ಕರಡಿಯ ಕೆಲಸ,
ಬೂದಿಯ ಬಿಡಕೊಂಬುದು ಕತ್ತೆಯ ಕೆಲಸ,
ಅರ್ಥವನರಿಯದೆ ನಾಮನ ನೋಡುವುದು ಗಿಳಿಯ ಕೆಲಸ,
ಇಂತೀ ಪಂಚವಿಧಾನವನು...... ..........
ಸಂಧಿಸಾಧಕರಿಗೆಂತು ಒಲಿಯುವನಯ್ಯಾ ? ..........

ಈ ಮಾತುಗಳಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ. ಪ್ರದಕ್ಷಿಣೆ ಹಾಕುವುದು ಮುಡಿ ಮಾಡುವುದು, ಮುಡಿ ಅರ್ಪಿಸುವುದು, ಭಸ್ಮಧಾರಣೆ ಗೈಯ್ಯುವುದು, ಭಗವನ್ನಾಮ ಸ್ಮರಣೆ ಮಾಡುವುದು ಈ ಪಂಚವಿಧ ಸೂತ್ರಗಳನ್ನು ಅನುಸರಿಸುವುದು ಒಬ್ಬ ಪರಿಶುದ್ಧ ಜಂಗಮನ ಸತ್ ಚಾರಿತ್ರವುಳ್ಳವನ ಆದ್ಯ ಕರ್ತವ್ಯ. ಆದರೆ ಈ ಕರ್ಮಾಚರಣೆಗಳು ಮನಮುಟ್ಟಿ ಮಾಡದಂತಿರಬೇಕೇ ಹೊರತು ಕೇವಲ ಪ್ರಾಣಿ-ಪಕ್ಷಿಗ ಶುಷ್ಕ ಆಚರಣೆಯಂತಿರಬಾರದು. ಇಲ್ಲಿ ಸ್ಪಷ್ಟ ಮಾತುಗಳಲ್ಲಿ ನೇರವಾಗಿ ಬಣಕಾರರು ಮಠ ಮಾನ್ಯಗಳ ಗುರು ಪರಂಪರೆಗೆ ನಿರ್ದಾಕ್ಷಿಣ್ಯವಾಗಿ ಹೇಳಿದ್ದಾರೆ.

---

## ಆಜೀವ ಸದಸ್ಯರಲ್ಲಿ ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ.

# ಧರ್ಮ ಮತ್ತು ವಿಜ್ಞಾನ

## ಧರ್ಮಾಚರಣೆಗೆ ಮತ್ತು ದೇವರ ಇರುವಿಕೆಗೆ ವಿಜ್ಞಾನ ಮತ್ತು ಧರ್ಮ ಒಂದಕ್ಕೊಂದು ಪೂರಕ.

ರಸಿಂಹಮೂರ್ತಿ, ಪ್ರಶಿಕ್ಷಕರು, ಶ್ರೀ ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ತುಮಕೂರು.

### ೕವರ ಕಲ್ಪನೆ:-

ಪ್ರತಿಯೊಂದು ಜೀವಿಯಲ್ಲಿಯೂ ಜೈವಿಕ ಚಟುವಟಿಕೆಯನ್ನು ನಡೆಸುವ ಕ್ತಿಯನ್ನೇ ನಾವು ದೇವರೆನ್ನುತ್ತೇವೆ, ಚಾಲಕ ಶಕ್ತಿಯಿಲ್ಲದೆ ಯಂತ್ರ ನಡೆಯು ಾರದು. ವಿದ್ಯುತ್ ಸಂಚಾರವಿಲ್ಲದೆ ವಿದ್ಯುತ್ ದೀಪ ಉರಿಯುವುದಿಲ್ಲ, ರೇಡಿಯೋ ರಂಗಗಳು ಕಾಣದೆಯೇ ರೇಡಿಯೋ ಕೇಳುತ್ತೇವೆ, ಇತ್ತೀಚಿನ ಕಂಪ್ಯೂಟರ್ ಾಗೂ ಎಲೆಕ್ಟ್ರಾನಿಕ್ಸ್ ಯುಗದಲ್ಲಿ ಎಲ್ಲ ರೀತಿಯ ಅಗೋಚರ ಕ್ರಿಯೆಗಳಿಂದ ಾರ್ಯ ನಿರ್ವಹಣೆಯಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಬೆಳಕಿದ್ದಾಗ ಪರದೆಯ ೕಲೆ ಚಿತ್ರ ಬೀಳುವುದಿಲ್ಲ. ಕತ್ತಲಾದಾಗ ಕಾಣುತ್ತೇವೆ. ಆದರೆ ಚಿತ್ರವು ಮೂಡಿಲ್ಲ ಂದು ಹೇಳಬಹುದೆ? ನವರಂಧ್ರಗಳ ಮೂಲಕ ತೂರಿ ತೂರಿಬರುವ ಅಜ್ಞಾನವನ್ನು ಡೆಹಿಡಿದು ಸಾಧನೆ ಮತ್ತು ಏಕಾಗ್ರತೆಯಿಂದ ದೇವರ ಕೃಪೆಯ ಸಾಕ್ಷಾತ್ಕಾರ ಪಡೆ ಯಲು ನಿರ್ದೇಶಿಸುವ ವಿಧಾನಗಳನ್ನೇ ಧರ್ಮ ಎನ್ನುತ್ತೇವೆ. ಧರ್ಮ ಇರುವುದು ಾಯಿಯ ಮಾತಿನಲ್ಲಲ್ಲ. ವಿವೇಕಾನಂದರು ತಿಳಿಸಿದಂತೆ, "ನಮ್ಮ ಸಮಾಜದ ದ್ಯದ ದುಃಸ್ಥಿತಿಗೆ ಧರ್ಮವು ಕಾರಣವಲ್ಲ, ಸರಿಯಾದ ಕ್ರಮದಲ್ಲಿ ಆಚರಣೆ ಮಾಡದೆ ರುವುದೇ ಕಾರಣ"

ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಿರುವ ಅತೀಂದ್ರಿಯ ಅನುಭವಗಳ ಂಪತ್ತಿಗಾಗಿ ರಷ್ಯನ್ನರು ಹಾತೊರೆಯುತ್ತಿದ್ದಾರೆ, ಜನ್ಮಾಂತರ ಕರ್ಮ ಸಿದ್ಧಾಂತಗಳ ಗ್ಗೆ ಕಳೆದ 30 ವರ್ಷಗಳಿಂದಲೂ ಅಮೆರಿಕಾದ ವರ್ಜೀನಿಯಾ ವಿಶ್ವವಿದ್ಯಾನಿಲಯದ ಾ|| ಆಯಾನ್ ಸ್ಟೀವನ್‌ಸನ್ ಸಂಶೋಧನೆ ನಡೆಸುತ್ತಿದ್ದಾರೆ. ಆದರೆ ನಾವುಗಳು ಮ್ಮ ಸಿದ್ಧಾಂತಗಳನ್ನು ವಿದೇಶಿಯರು ಸಂಶೋಧಿಸಿದ ನಂತರ ಪುನಃ ನಾವೇ ಡೆದು ಅವುಗಳ ಬಗ್ಗೆ ತಿಳಿದುಕೊಳ್ಳಲು ಕಾತುರರಾಗಿದ್ದೇವೆ. ನಮ್ಮ ಹಿತ್ತಲಿನ ಡವನ್ನು ವಿದೇಶಕ್ಕೆ ರಫ್ತುಮಾಡಿ ಪುನಃ ಅದನ್ನೇ ಆಮದು ಮಾಡಿಕೊಂಡು ದೆಂತಹ ಅದ್ಭುತ ಔಷಧಿ ಎಂದು ತಿಳಿದು ಕೊಂಡಾಡುವ ಸ್ಥಿತಿಗೆ ಬಂದಿದ್ದೇವೆ, ನಮ್ಮ ್ಞಾನ ಸಂಪತ್ತನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಬೇರೆಯವರ ಸಂಸ್ಕೃತಿಗೆ ್ರಚಾಚಿ ನಮ್ಮ ಧರ್ಮ ಮತ್ತು ಸಂಸ್ಕೃತಿಯನ್ನು ಅಲ್ಲಗಳೆಯುವ ಮಟ್ಟಕ್ಕೆ ಂದಿದ್ದೇವೆ. ಆದ್ದರಿಂದ ಧರ್ಮಾಚರಣೆ ಮತ್ತು ಸಂಸ್ಕೃತಿಯ ಬಗ್ಗೆ ಸರಿಯಾದ ಧ್ಯಯನ ನಡೆಸಿದರೆ ದೇವರ ಇರುವಿಕೆ ತಿಳಿಯುತ್ತದೆ.

## ಭಗವಂತನ ಮಹಿಮೆ :-

ಮಹಾಭಾರತದ ಒಂದು ಪ್ರಸಂಗದಲ್ಲಿ ದುರ್ಯೋಧನನು ಶ್ರೀ ಕೃಷ್ಣನ
ಸೆರೆಹಿಡಿಯಲು ಹವಣಿಸುತ್ತಾನೆ ಎಲ್ಲಿ ನೋಡಿದರೂ ಶ್ರೀ ಕೃಷ್ಣನು ಕಂಡು ಬಂದ
ದರಿಂದ ಸೆರೆಹಿಡಿಯುವ ಕೆಟ್ಟ ಸಾಹಸಕ್ಕೆ ಅವನು ಕೈಹಾಕಲಿಲ್ಲವಂತೆ ಸೌರವ್ಯೂಹ
9 ಗ್ರಹಗಳಿವೆ, ಉಲ್ಕೆಗಳು, ಕ್ಷುದ್ರಗ್ರಹಗಳು, ಉಪಗ್ರಹಗಳು, ಇವೆ ಎಂಬುದನ
ಖಗೋಳ ವಿಜ್ಞಾನದಲ್ಲಿ ತಿಳಿದಿದ್ದೇವೆ. ಆದರೆ ಜೀವಿಗಳಿಗೆ ಬೇಕಾಗುವ ಆಮ್ಲಜ
ಹೊಂದಿರುವ ಗ್ರಹವೇ ಪೃಥ್ವಿ. ಜೀವನವೆಂಬ ನಾಟಕವಾಡುವ ವಿಶ್ವದ ರಂಗಸ್ಥಳ
ಭೂಮಿ. ವಿಜ್ಞಾನಿಗಳು ದೇವರನ್ನು ಖಂಡಿತಾ ನಂಬಿರುತ್ತಾರೆ ಎಂಬುದನ್ನು ಅಮೆ
ರಿಕಾದ ವಿಜ್ಞಾನ ಅಕಾಡೆಮಿಯ ಅಧ್ಯಕ್ಷರಾದ ಎ. ಕ್ರೆಸ್ಸಿತೊರಿಸನ್‌ರವರು 1949
ಜನವರಿ "ರೀಡರ್ಸ್ ಡೈಜೆಸ್ಟ್"ನಲ್ಲಿ ತಮ್ಮ ದೀರ್ಘಕಾಲದ ಅವಧಿಯ ಅನುಭವ
ಹಿನ್ನೆಲೆಯಲ್ಲಿ ದೇವರ ಇರುವಿಕೆ ಬಗ್ಗೆ ತಿಳಿಸಿದ್ದಾರೆ.

"ಶರೀರ ಮಾಧ್ಯಮಂ ಖಲು ಧರ್ಮಸಾಧನಂ" ಎಂಬಂತೆ ಸೃಷ್ಟಿಯಲ್ಲಿ ಮಾನ
ನಿರ್ಮಾಣ ಹೇಗೆ ಧರ್ಮದ ಸಾಧನೆಗೆ ಸಹಕಾರ ಎಂಬುದು ಪ್ರಕೃತಿಯು ನವ
ಸಮತೋಲನದ ಜೀವನೋಪಾಯವನ್ನು ಕಾಣುತ್ತಿರುವುದೇ ಆಗಿದೆ. ಸೂರ್ಯನಿಂ
9000 ಮಿಲಿಯನ್ ಕಿಲೋಮೀಟರ್ ದೂರದಲ್ಲಿ $23\frac{1}{2}$° ವಾಲಿರುವ ಚೆಂಡು ತ
ಅಕ್ಷದ ಮೇಲೆ ಸುತ್ತುತ್ತಿರುವುದರಿಂದ ಭೂಮಿಯಲ್ಲಿ ಹಿತವಾದ ಶಾಖ-ಬೆಳಕು ಇ
ಹಗಲು-ರಾತ್ರಿಗಳು ಲಯ ಬದ್ಧವಾಗಿ ಉಂಟಾಗುತ್ತವೆ. ಕುದಿಯುವ ನೀರಿನ ಉಷ್ಣ
100°ಸೆ ಸೂರ್ಯನ ಮೇಲ್ಮೈ ಉಷ್ಣತೆ 6000°C ಆಕಸ್ಮಾತ್ ಈ ಸೂರ್ಯ ಇನ
ಹತ್ತಿರ ಬಂದಿದ್ದರೆ ನಾವು ಬೆಂದು ಹೋಗುತ್ತಿದ್ದೆವು. ಇನ್ನೂ ದೂರವಿದ್ದರೆ ಚ
ಯಲ್ಲಿ ನಡುಗಬೇಕಾದ್ದಿತ್ತು. ಆಮ್ಲಜನಕದ ಕೊರತೆ ಇತ್ತು. ನಮ್ಮ ಭೂಮಿ
ವಾತಾವರಣದ ದಪ್ಪ 600ಕಿ,ಮೀ,ಗಳು. ಇದೇನಾದರು ಕಡಿಮೆ ಇದ್ದಿದ್ದರೆ ಅಲ್ಟ್ರಾವ
ಯ್‌ಲೆಟ್ ಕಿರಣಗಳು ಭೂಮಿಗೆ ಬಿದ್ದು ಉಲ್ಕೆಗಳು ಭೂಮಿಗೆ ಬೀಳುತ್ತಿತ್ತು.
ಮಾನವಕೋಟಿಗೆಸರಿ ಹೊಂದುವ ವಾತಾವರಣವನ್ನು ನಿರ್ಮಿಸಿದವರು ಯಾರು? ಇದ
ದೇವರೆಂದೇ ಹೇಳಬೇಕಾದರೆ, ಇದನ್ನು ಕಾಪಾಡಲು ಧರ್ಮವನ್ನು ರಕ್ಷಿಸಬೇಕಲ್ಲವೆ?

ನಮ್ಮ ಶರೀರವು ಒಂದು ಸೋಜಿಗದ ಯಂತ್ರ ಜೀವಕೋಶಗಳಿಂದ ಕೂಡಿದ
ಇದರಿಂದ ಅಂಗಾಂಗಗಳು ಹಾಗೂ ಇದರಿಂದ ಅಂಗರಚನೆಯಾಗಿದೆ. ನಮ್ಮದೇ
ದಲ್ಲಿ 10 ಸಾವಿರ ಮಿಲಿಯನ್ ಜೀವಕೋಶಗಳಲ್ಲಿ ಕ್ರೋಮೋಸೋಮ್‌ಗಳು ಹಾಗ
ಇವುಗಳಲ್ಲಿ 1500 ಜೀನ್‌ಗಳಿವೆ. ಇದರಿಂದ ವಂಶಾಭಿವೃದ್ಧಿ ಅಂಶಗಳಿವೆ ನವ
ಮೆದುಳಿನ ತೂಕ ಸರಾಸರಿ $1\frac{1}{2}$ ಕಿಗ್ರಾಂ. ಇಷ್ಟು ಚಿಕ್ಕ ವಸ್ತುವಿನ ಶಕ್ತಿ ಎಷ್ಟ
ಎಂದರೆ ಅಮೆರಿಕಾದಲ್ಲಿರುವ ಒಂದು ಗ್ರಂಥಾಲಯದಲ್ಲಿ 9 ಮಿಲಿಯನ್ ಪುಸ್ತಕದಲ್ಲಿ
ಎಲ್ಲಾ ವಿಚಾರಗಳ 50 ರಷ್ಟು ವಿಚಾರವನ್ನು ಗ್ರಹಿಸಬಲ್ಲ ಶಕ್ತಿ ಹೊಂದಿರುತ್ತದ
ನಮ್ಮ ಶರೀರಕ್ಕೆ ಇಷ್ಟೊಂದು ಶಕ್ತಿ ಇರಬೇಕಾದರೆ ಮತ್ತು ಈಕಾರ್ಯವನ್ನು ಸ

...ಜಿತ ರೀತಿ ನಿರ್ವಹಿಸಲು ತಯಾರು ಮಾಡಿರುವ ದೈವ ನಿರ್ಮಿತ ಯಂತ್ರ ...ರಿಂದ ಸಾಧ್ಯವೆಂಬುದನ್ನು ಮಾನವರು ಊಹಿಸ ಬೇಕಾದದ್ದು ಧರ್ಮವೇ ಸರಿ.

ಈ ಎಲ್ಲಾ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಜ್ಞಾನೇಂದ್ರಿಯಗಳ ...ಮೂಲಕ ಸಂಪಾದಿಸುವ ಜ್ಞಾನಸಂಪತ್ತನ್ನು ಹೆಚ್ಚಿಸಿ, ಮಾನವರು ಮಾನವರಾಗಿ ...ಳಿದಾಗ ಸೃಷ್ಟಿ ಕರ್ತರ ಕಾರ್ಯ ಯಶಸ್ವಿಯಾಗುತ್ತದೆಂದು ತಿಳಿಯಬೇಕು

ಆದರಿಂದ ದೇವರು ಕೊಟ್ಟಿರುವ ಪ್ರಕೃತಿ ಸಂಪತ್ತನ್ನು ಸರಿಯಾದ ರೀತಿ ...ಪಯೋಗಿಸಿಕೊಂಡು ಕೇವಲ ಭೋಗಜೀವನಕ್ಕೇ ನಮ್ಮ ನಿರ್ಮಾಣವೆಂಬುದನ್ನು ...ಟ್ಟು, 'ಧರ್ಮ' ಎಂಬುದರ ಪದದ ಅರ್ಥವನ್ನು ತಿಳಿದುಕೊಂಡು ಅದರ ಪಾಲನೆಗೆ ...ನುಗುಣವಾದ ಸಾರ್ಥಕ ಜೀವನವನ್ನು ನಡೆಸುವುದಾದರೆ, ವಿಜ್ಞಾನವೇ ಆಗಲಿ, ...ಹಿತ್ಯವೇ ಆಗಲಿ ಅಡ್ಡ ಬರಲು ಸಾಧ್ಯವಿಲ್ಲ. ಮುಂದೆ ಅನೇಕ ಜನ್ಮಗಳು ತಲೆ ...ತ್ತುವುದಿರಿಂದ ಅದು ಸಾರ್ಥಕವಾಗಲು ಧರ್ಮವನ್ನು ವಿಜ್ಞಾನದೊಡನೆ ಸೇರಿಸಿ ...ರಿಯಾಗಿ ಅರ್ಥಮಾಡಿಕೊಂಡರೆ ನಶ್ವರವಾದ ಮತ್ತು ದೇವರು ಕೊಟ್ಟಿರುವ ಈ ...ಾನವ ಜನ್ಮವು ಸಾರ್ಥಕವಾಗುತ್ತದೆಂದು ತಿಳಿಯಬೇಕು. ಇತ್ತೀಚಿನ ಯುವ ಪೀಳಿಗೆ ...ಲ್ಲಿ ನಾಗರೀಕ, ಸಂಸ್ಕೃತಿ, ನೀತಿ ಹಾಗೂ ವಿನಯವು ಪೂರ್ಣವಾಗಿ ಮಾಯ ...ಾಗುತ್ತಿದ್ದು, ಶಿಕ್ಷಣವೇ ಇದಕ್ಕೆಲ್ಲ ಕಾರಣವಿರಬೇಕೆಂಬುದು ನುವದಟ್ಟಾಗುತ್ತಿದೆ. ...ೂರ್ಣವಾಗಿ ಅರ್ಥಮಾಡಿಕೊಂಡು ಹಿಂದೂ ಧರ್ಮವನ್ನು ಎತ್ತಿ ಹಿಡಿಯಲು ಭರತ ...ಂಡದ ಪ್ರತಿ ಪ್ರಜೆಯೂ ಧರ್ಮದ ಬಗ್ಗೆ ಅರಿವು ಮೂಡಿಸಿಕೊಳ್ಳಲಿ

---

# ವಿವಾಹ ವಿಚ್ಛೇದನ

ಜಿ. ಶಾರದ ರಾಜಶೇಖರ್. 847, 4ನೇ ಮೈನ್, ವಿಜಯನಗರ, ಬೆಂಗಳೂರು-40

ವಿವಾಹವಾದ ಪತಿಪತ್ನಿಯರು ತಮ್ಮ ವಿವಾಹವು ಒಂದು ಅಸಮರ್ಪಕವಾದ ಸಂಬಂಧವೆಂದು ಅರಿತುಕೂಡಿಬಾಳಲಾರದೆ ತಮ್ಮ ವಿವಾಹವನ್ನು ರದ್ದು ಮಾಡಿಕೊಂಡು ಸ್ವತಂತ್ರರಾಗಿ ಬಾಳಲು ಅನೇಕ ವೇಳೆ ಬಯಸುತ್ತಾರೆ. ಅಂತಹ ವ್ಯಕ್ತಿಗಳು ಕಾನೂನು ಬದ್ಧವಾಗಿ ಮದುವೆಯನ್ನು ರದ್ದು ಮಾಡುವ ಪದ್ಧತಿಗೆ "ವಿವಾಹ ವಿಚ್ಛೇದ" ವೆಂದು ಕರೆಯುತ್ತಾರೆ, ಮದುವೆಯನ್ನು ಕಾನೂನು ಬದ್ಧವಾಗಿ ರದ್ದುಮಾಡಿ ಕೊಂಡವರು ಮತ್ತೆ ವಿವಾಹ ಮಾಡಿಕೊಳ್ಳುವ ಹಕ್ಕುಂಟು, "ಏಕಪತ್ನಿ" ಜಾರಿಯಲ್ಲಿರುವ ಸಮಾಜಗಳಲ್ಲಿ ಪುರುಷನಿಗಾಗಲಿ, ಸ್ತ್ರೀಗಾಗಲಿ ವಿವಾಹ ವಿಚ್ಛೇದನವಾದ ಹೊರತು ಪುನಃ ಮದುವೆ ಮಾಡಿಕೊಳ್ಳುವ ಅವಕಾಶ ವಿರುವುದಿಲ್ಲ.

ಸಮಾಜ ಶಾಸ್ತ್ರದ ದೃಷ್ಟಿಯಲ್ಲಿ ವಿವಾಹ ವಿಚ್ಛೇದವು ಒಂದು ಆವಶ್ಯಕವಾದ ಆಧುನಿಕ ಸುಧಾರಣೆ, ಪತಿ ಪತ್ನಿ ಜೊತೆಯಲ್ಲಿ ನೆಮ್ಮದಿಯಿಂದ ಬಾಳಲಾರದೆ ಜೀವಮಾನವೆಲ್ಲಾ ದುಃಖತಪ್ತರಾಗಿ ಬಾಳನ್ನು ದೂಡುವ ಬದಲು ವಿವಾಹವನ್ನು ರದ್ದುಪಡಿಸಿಕೊಂಡು ಸ್ವತಂತ್ರರಾಗಿ ತಮ್ಮ ಭವಿಷ್ಯ ಜೀವನವನ್ನು ಸುಖಮಯ ವಾಗುವಂತೆ ರೂಪಿಸಿಕೊಳ್ಳಲು ವಿವಾಹ ವಿಚ್ಛೇದನ ಸಹಕಾರಿಯಾಗುತ್ತದೆ.

ಆದರೆ ಪರಿಶೀಲಿಸಿ ನೋಡಿದಾಗ ಸಣ್ಣಪುಟ್ಟ ಕಾರಣಗಳನ್ನು ಮುಂದಿಟ್ಟು ಕೊಂಡು ಪತ್ನಿಯನ್ನೊ ಅಥವಾ ಪತಿಯನ್ನೋ ತೊರೆಯಲು ಈ ವ್ಯವಸ್ಥೆಯನ್ನು ಉಪಯೋಗಿಸಿಕೊಳ್ಳಲು ಪ್ರಯತ್ನಗಳು ನಡೆದಿವೆ, ನಡೆಯುತ್ತಾ ಇವೆ, ಇದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ನಡೆದಿದೆ.

ವಿವಾಹಿತರು ತಮ್ಮ ವಿವಾಹವನ್ನು ರದ್ದು ಮಾಡಿಕೊಳ್ಳ ಬಯಸಲು ಅನೇಕ ಕಾರಣಗಳಿರಬಹುದು, ಆದರೆ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ

ಆರ್ಥಿಕವಾಗಿ ಮುಂದುವರಿದು ಜೀವನ ಮಟ್ಟ ಉನ್ನತವಾಗಿರುವ ಸಮಾಜ ಗಳಲ್ಲಿ ವಿವಾಹ ವಿಚ್ಛೇದನ ಹೆಚ್ಚಾಗಿರುತ್ತದೆ, ಹಳ್ಳಿಯ ಜನರಿಗಿಂತ ಪಟ್ಟಣ ವಾಸಿಗಳಲ್ಲಿ ವಿವಾಹ ವಿಚ್ಛೇದನ ಹೆಚ್ಚಾಗಿರುತ್ತದೆ, ಪಟ್ಟಣಗಳಲ್ಲಿ ಜನರಿಗೆ ಮನೆಯ ಹೊರಗಿನ ಆಕರ್ಷಣೆಗಳು ಅನೇಕವಾಗಿರುತ್ತವೆ, ಇವು ಕುಟುಂಬದ ಬಂಧನವನ್ನು ಸಡಲಿಸಬಲ್ಲವು, ಜೊತೆಗೆ ಹಳ್ಳಿಗಳಲ್ಲಿ ಜನರ ಮೇಲೆ ಹಿಂದಿನ ಸಂಪ್ರದಾಯಗಳ ಹಿಡಿತ ಹೆಚ್ಚು, ಜನರು ಅವುಗಳನ್ನು ಸುಲಭವಾಗಿ ವಿರೋಧಿಸಿ ನಡೆದು ಕೊಳ್ಳುವುದು ಅಪರೂಪ.

ಆರ್ಥಿಕವಾಗಿ ಸ್ವಾತಂತ್ರ್ಯವಿಲ್ಲದ ಕಾಲದಲ್ಲಿ ಮಹಿಳೆ ಪತಿಯನ್ನು ಅನುಸರಿಸಿ, ಅವನ ಇಚ್ಛೆಗೆ ಪ್ರಾಧಾನ್ಯತೆಯನ್ನು ಕೊಟ್ಟು, ಜೀವಮಾನವೆಲ್ಲ ದುಃಖಮಯವಾಗಿ ಕಳೆಯಬೇಕಾಗಿತ್ತು. ವಿವಾಹ ವಿಚ್ಛೇದನ ಪದ್ಧತಿ ಜಾರಿಗೆ ಬಂದ ನಂತರ ವಿದ್ಯಾವಂತ ಹೆಂಗಸರು ತಮ್ಮ ಕಾಲಿನ ಮೇಲೆ ತಾವು ನಿಂತುಕೊಳ್ಳಬಲ್ಲವರಾಗಿ ಅಪ್ರಯೋಜಕರಾದ ಗಂಡಂದಿರ ದಬ್ಬಾಳಿಕೆಯನ್ನು ಪ್ರತಿಭಟಿಸಿ ದುಃಖಮಯವಾದ ವಿವಾಹ ಬಂಧನದಿಂದ ಬಿಡುಗಡೆ ಹೊಂದಲು ಹೆಚ್ಚು ಹೆಚ್ಚಾಗಿ ಪ್ರಯತ್ನ ಮಾಡುತ್ತಿದ್ದಾರೆ, ಮಕ್ಕಳಿಲ್ಲದ ಕುಟುಂಬಗಳಲ್ಲೇ ವಿವಾಹ ವಿಚ್ಛೇದಗಳು ಹೆಚ್ಚು; ಗಂಡ ಹೆಂಡಿರ ನಡುವೆಹುಟ್ಟುವ ವಿರಸಕ್ಕೆ ಮಕ್ಕಳೆ ಮದ್ದು, ಭಿನ್ನ ಮಾರ್ಗಗಳಲ್ಲಿ ಹೊರಡಲುದ್ಯುಕ್ತರಾದ ತಂದೆ ತಾಯಿಯರನ್ನು ಮಕ್ಕಳು ಒಟ್ಟುಗೂಡಿಸಬಲ್ಲರು, ಇತರ ವಿಧವಾದ ನಿರಾಶೆಹೊಂದಿದ ಗಂಡ ಹೆಂಡಿರು ತಮ್ಮ ಮಕ್ಕಳಲ್ಲಿ ಸುಖವನ್ನು ಕಾಣಬಲ್ಲರು. ವೇಗವಾಗಿ ಬದಲಾಗುತ್ತಿರುವ ಸಮಾಜಗಳಲ್ಲಿ ವಿವಾಹ ವಿಚ್ಛೇದನಗಳ ಸಂಖ್ಯೆ ಹೆಚ್ಚಾಗುತ್ತಿರುವಂತೆ ಕಾಣಬರುತ್ತಿದೆ.

ವಿವಾಹ ಜೀವನದಲ್ಲಿ ಗಂಡ-ಹೆಂಡಿರ ಮಧ್ಯದ ದೈಹಿಕ ಸಾಮರಸ್ಯಕ್ಕಿಂತ ಮಾನಸಿಕ ಸಾಮರಸ್ಯವು ಹೆಚ್ಚು ಪರಿಣಾಮ ಬೀರ ಬಲ್ಲದು, ಮಾನಸಿಕ ಸಾಮರಸ್ಯವಿಲ್ಲದ ದಂಪತಿಗಳು ಸಣ್ಣಪುಟ್ಟ ವ್ಯತ್ಯಾಸಗಳನ್ನು ಉತ್ಪ್ರೇಕ್ಷೆ ಮಾಡಿ ಸೌಖ್ಯವನ್ನು ಕಳೆದುಕೊಳ್ಳುತ್ತಾರೆ. ಮುಂದುವರಿದ ಅನೇಕ ಸಮಾಜಗಳಲ್ಲಿ ವಿವಾಹ ವಿಚ್ಛೇದನವು ಬಹುದೊಡ್ಡ ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ, ವಿವಾಹ ವಿಚ್ಛೇದಗಳಿಂದ ಅನೇಕ ಕುಟುಂಬಗಳು ಒಡೆದು ಹೋಗಿವೆ, ಮಕ್ಕಳಿರುವ ಕುಟುಂಬಗಳಲ್ಲಿ ಇದರ ದುಷ್ಪರಿಣಾಮವನ್ನು ಸ್ಪಷ್ಟವಾಗಿ ಕಾಣಬಹುದು. ಮಕ್ಕಳು ಆರೋಗ್ಯಕರವಾಗಿ ಬೆಳೆಯ ಬೇಕಾದರೆ ತಂದೆ ತಾಯಿಯರಿಬ್ಬರ ಪ್ರೀತಿ ವಿಶ್ವಾಸಗಳು ಮತ್ತು ಇತರ ಪ್ರಭಾವಗಳು ಅತ್ಯವಶ್ಯಕ, ಭಗ್ನವಾದ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ ತಮ್ಮ ಮನೆಯು ಇತರ ಮಕ್ಕಳ-ಕುಟುಂಬಗಳಂತೆ ಇಲ್ಲವೆಂಬ ಭಾವನೆಯು ಅವರನ್ನು ಕಾಡುತ್ತದೆ, ತಮ್ಮ ಮನೆಯಲ್ಲಿ ಏನೋಲೋಪವಿದೆಯೆಂಬ ಭಾವನೆ ಉಳ್ಳವರಾಗುತ್ತಾರೆ,

ನಮ್ಮ ಸಮಾಜದಲ್ಲಿರುವ ತರುಣ ಅಪರಾಧಿಗಳಲ್ಲಿ ಸುಮಾರು ಅರ್ಧಮಂದಿ ಈ ಭಗ್ನವಾದ ಕುಟುಂಬಗಳಿಗೆ ಸೇರಿದ್ದಾರೆಂದು ಡಿಟ್ಮರ್, ಗಿಲ್ಲಿನ್ ಮೊದಲಾದವರು ಹೇಳಿದ್ದಾರೆ.

ವಿವಾಹ ವಿಚ್ಛೇದನದನಂತರ ಅವರು ತಮ್ಮ ಜೀವನದಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಅನೇಕ ಹೊಸ ಆರ್ಥಿಕ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ, ಗಂಡಸು ತಾನು ತ್ಯಜಿಸಿದ ಹೆಂಡತಿಗೆ ಜೀವನಾಂಶವನ್ನು ಕೊಡಬೇಕಾಗುತ್ತದೆ.

ಎರಡು ಸಂಸಾರಗಳ ಖರ್ಚನ್ನು ವಹಿಸಿಕೊಳ್ಳಬೇಕಾಗುತ್ತದೆ. ಹೆಂಗಸು ಉದ್ಯೋಗಸ್ಥಳಲ್ಲದಿದ್ದರೆ ಆವಯಸ್ಸಿನಲ್ಲಿ ಕೆಲಸಕ್ಕೆ ಸೇರಿಕೊಂಡು ಹಣವನ್ನು ಸಂಪಾದಿ ಜೀವನವನ್ನು ನಡೆಸಬೇಕಾಗುತ್ತದೆ. ಮಕ್ಕಳನ್ನು ಪೋಷಿಸಬೇಕಾಗುತ್ತದೆ. ವಿವಾಹ ವಿಚ್ಛೇದ ಮಾಡಿಕೊಂಡವರಲ್ಲಿ ಅನೇಕರು ಜೀವನದಲ್ಲಿ ಸೋಲನ್ನು ಅನುಭವಿಸಿದ ವೆಂದು ಕೊರಗುವುದುಂಟು. ಬಹುಮಂದಿಯನ್ನು '- ಏಕಾಂಗಿತನ ' ಬಹಳವಾಗಿ ಕಾಡುತ್ತದೆ, ಮರ್ಯಾದಸ್ಥರು ಅಂಥವರೊಡನೆ ಸೇರಬಯಸುವುದಿಲ್ಲ. ಇದರಿಂ ದಾಗಿ ಸಮಾಜದಲ್ಲಿ ಅವರ ಸ್ಥಾನಮಾನಗಳಿಗೇ ಧಕ್ಕೆ ಬರಬಹುದು. ಹೀಗಾಗಿ ವಿವಾಹ ವಿಚ್ಛೇದನ ಮಾಡುವ ಮುನ್ನ, ಕೂಲಂಕುಷವಾಗಿ ಯೋಜನೆಮಾಡಿಕೊಂಡು ನಿರ್ಧಾರ ತೆಗೆದುಕೊಳ್ಳುವುದು ಸೂಕ್ತ. ಆತುರದ ತೀರ್ಮಾನವನ್ನು ಕೈಗೊಂಡರ ಜೀವಮಾನ ಪರ್ಯಂತ ಪಶ್ಚಾತ್ತಾಪ ಪಡಬೇಕಾದೀತು, ಅನಿವಾರ್ಯ ಎಂದಾಗ ಮಾತ್ರ ವಿಚ್ಛೇದನ ಸೂಕ್ತ. ○

---

## ಮಾನವನ ಬದುಕು

ಸಿದ್ದರಾಜ್ ಐವಾರ್, 15/89, 2ನೇ ಕ್ರಾಸ್, ಸಿದ್ದಗಂಗಾ ಬಡಾವಣೆ, ತುಮಕೂರು.

ಹೆತ್ತವರ ಪಾದರಕ್ಷೆಯಾಗಿ
ಗುರುಪಾದ ಸೇವೆಯಲಿ
ನೆರೆ ಹೊರೆಗೆ ಬಂಧುವಾಗಿ
ಬಾಳು ನೀ ಮಾನವ.

ನಂಬಿಕೆಯಲಿ ಶ್ವಾನನಂತೆ
ದುಡಿಮೆಯಲಿ ಗಾರ್ದಭವಾಗಿ
ಶೌರ್‍ಯದಲಿ ಕರಿಯಂತೆ
ಬಾಳು ನೀ ಮಾನವ.

ಶತ್ರುಗಳಿಗೆ ಕೇಸರಿಯಾಗಿ
ಮಿತ್ರರಿಗೆ ಶಶಾಂಕನಾಗಿ
ಆಶಯಿತರಿಗೆ ಕಾಮಧೇನುವಾಗಿ
ಬಾಳು ನೀ ಮಾನವ.

ಭಕ್ತಿಯ ಮರೆಯದೇ
ಹಿಂದು ಧರ್ಮವಾ ಬಿಡದೆ
ದಾನಕೆ ಗಳಿಕೆಯ ಎಣಿಸದೇ
ಬಾಳು ನೀ ಮಾನವ.

ನೀಚರೊಡನಾಡದೇ
ಸಜ್ಜನರೊಡನೆ ಬೆಸುಗೆಯಾಗಿ
ನಾಲ್ವರೊಬ್ಬರಲಿ ಒಬ್ಬನಾಗಿ
ಸದ್ಗುಣಿಯಾಗಿ
ಬಾಳು ನೀ ಮಾನವ.

ಮಡಿಯಲಿ ವೀರಶೈವನಾಗು
ಸತ್ಯದಲಿ ಹರಿಶ್ಚಂದ್ರನಾಗು
ದಾನದಲಿ ಕರ್ಣನಾಗು
ಅಮರನಾಗು ಮಾನವರಲಿ ನೀ
ಶರಣನಾಗು.

# ನರ್ಮದಾ ಕಣಿವೆಯಲ್ಲೊಂದು ನರಕದ ನಿರ್ಮಾಣ

ರ್. ಚಂದ್ರಶೇಖರ್, ಉಪನ್ಯಾಸಕರು, ವಿಜಯನಗರ ಕಾಲೇಜ್, ಹೊಸಪೇಟೆ-583201

ವಿಶ್ವದಲ್ಲೇ ಅತಿದೊಡ್ಡದು ಎನ್ನಲಾದ ನದಿಕಣಿವೆ ಯೋಜನೆಯಾದ ನರ್ಮದಾ ಣಿವೆ ನೀರಾವರಿ ಯೋಜನೆಗಳ ನಿರ್ಮಾಣ ಕಾರ್ಯ ಕೇಂದ್ರ ಸರ್ಕಾರ ಹಸಿರುಬಾವುಟ ೇರಿಸಿದ್ದರಿಂದ ಪ್ರಾರಂಭವಾಗಿದೆ. ಮಧ್ಯಪ್ರದೇಶ ಮತ್ತು ಗುಜರಾತ್ ರಾಜ್ಯಗಳಲ್ಲಿ ಶತಮಾನಗಳಿಂದ ಸ್ವತಂತ್ರವಾಗಿ ಮತ್ತು ಅನಿರ್ಭಂಧಿತವಾಗಿ ಹರಿಯುತ್ತಿರುವ ರ್ಮದಾನದಿಯನ್ನು 30 ದೊಡ್ಡ, 53ಮಧ್ಯಮ ಗಾತ್ರದ ಮತ್ತು 3000 ಸಣ್ಣ ಕಟ್ಟೆಗಳ ಮೂಲಕ ನಿಯಂತ್ರಿಸುವ ಮತ್ತು ನಿರ್ಭಂಧಿಸುವ ಕಾರ್ಯವೆ ನರ್ಮದಾ ಣಿವೆ ನೀರಾವರಿ ಯೋಜನೆಗಳ ಸ್ಥೂಲ ಸ್ವರೂಪ. ಪರಿಸರವಾದಿಗಳು, ಜಲವಿಜ್ಞಾನಿ- ಳು, ಸಮಾಜ ವಿಜ್ಞಾನಿಗಳು, ಸಾಮಾಜಿಕ ಕಾರ್ಯಕರ್ತರು, ಭೂಕಂಪನ ಶಾಸ್ತ್ರಜ್ಞರು ುಂತಾದವರ ಭಿನ್ನಮತ ಮತ್ತು ಪ್ರತಿಭಟನೆಯನ್ನು ಲೆಕ್ಕಿಸದೆ ಕೇಂದ್ರಸರ್ಕಾರವು ಈ ಹಾಯೋಜನೆಗೆ ಅನುಮತಿ ನೀಡಿದೆ. ಈ ಮಹಾಯೋಜನೆ ಸೃಷ್ಟಿಸಿರುವ ಸಂಪತ್ತಿ- ಂತ ಸೂರೆಗೊಳ್ಳುವ ಸಂಪತ್ತೇ ಅಧಿಕ ಎನ್ನಲಾಗಿದೆ. ನರ್ಮದಾಕಣಿವೆ ನೀರಾವರಿ ೋಜನೆಗಳ ಜಾಲದಲ್ಲಿ ಬಹುಮುಖ್ಯವಾಗಿರುವ 'ಸರ್ದಾರ್ ಸರೋವರ'(ಗುಜರಾತ್) ತ್ತು 'ನರ್ಮದಾ ಸಾಗರ್'(ಮಧ್ಯಪ್ರದೇಶ್)ಯೋಜನೆಗಳು ತೀವ್ರವಾದ ವಿವಾದಕ್ಕೆ ಲುಕಿವೆ. ಈ ಮಹಾಯೋಜನೆಗೆ ಅನುಮತಿ ನೀಡುವುದರ ಮೂಲಕ ಕೇಂದ್ರಸರ್ಕಾರ ನ್ನ ಪರಿಸರ ರಕ್ಷಣೆ ಬಗೆಗಿನ ದಿವ್ಯ ನಿರ್ಲಕ್ಷ್ಯವನ್ನು ಜಗಜ್ಜಾಹೀರು ಮಾಡಿಕೊಂಡಿದೆ. ದು ಸರ್ಕಾರದ ಪರಿಸರ ಪ್ರಜ್ಞೆಯ ಬಗ್ಗೆ ನಾಗರೀಕರಲ್ಲಿ ಅನುಮಾನಕ್ಕೆ ಎಡೆಮಾಡಿ ೊಟ್ಟಿದೆ.

ಅನಾದಿ ಕಾಲದಿಂದಲೂ ನರ್ಮದಾ ನದಿಕಣಿವೆಯಲ್ಲಿ ಜೀವಿಸುತ್ತಾ ಬಂದಿರುವ ಮಾವುತ್ತೂ ಜೀವರಾಶಿ ಮತ್ತು ಸಸ್ಯರಾಶಿಗೆ ಈ ಯೋಜನೆ ಮಾರಕವಾಗಲಿದೆ. ಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ವೇದಿಕೆಗಳಲ್ಲಿ ಪರಿಸರ ರಕ್ಷಣೆಯ ಬಗ್ಗೆ ಕೂಯಿ ೆಬ್ಬಿಸುತ್ತಿರುವ ನಮ್ಮ ಕೇಂದ್ರ ಸರ್ಕಾರವು ತಾನೇ ಪರಿಸರ ನಾಶದ ಕಾರ್ಯದಲ್ಲಿ ಾಲುಗಾರನಾಗಿರುವುದು ಒಂದು ವಿಪರ್ಯಾಸವೇ ಸರಿ. ಸುಮಾರು 4' ಉಪನದಿಗಳಿಂದ 1300ಕಿ.ಮೀ ಉದ್ದದ, ಹಲವಾರು ರುದ್ರರಮಣೀಯವಾದ ಜಲಪಾತಗಳಿಂದ ಕೂಡಿ ರುವ, ವೈವಿಧ್ಯತೆಯ ತಳಿನಿಕ್ಷೇಪ ಹೊಂದಿರುವ ನರ್ಮದಾ ಕಣಿವೆಜಾಲ ಸುಮಾರು ಎರಡು ಕೋಟಿ ಜನರ ಜೀವನಾಡಿಯಾಗಿದೆ. ಬಿಲ್ಲ, ಗೊಂಡ, ಬೈಗಾ ಮುಂತಾದ ಬುಡಕಟ್ಟು ಜನಾಂಗದವರ ಪ್ರಾಣನದಿಯಾಗಿದೆ. ಅಂತರರಾಷ್ಟ್ರೀಯ ನದಿಸಂಸ್ಥೆ (International River Organisation) ಯವರು ಸಿದ್ಧಪಡಿಸಿರುವ ಅತ್ಯಂತ ಅಪಾಯದ ನೀರಾವರಿ ಯೋಜನೆ ಪಟ್ಟಿಯಲ್ಲಿ ನರ್ಮದಾಕಣಿವೆ ನೀರಾವರಿ ಯೋಜನೆ ಎರಡನೆಯ ಸ್ಥಾನ ಪಡೆದಿದೆ.

## ಸೃಷ್ಟಿಯಾಗಲಿರುವ ಸಂಪತ್ತು

ಮಧ್ಯಪ್ರದೇಶದ ಕಾಂಡವ ಜಿಲ್ಲೆಯ ಪುನಾಸ ಎಂಬಲ್ಲಿ ನಿರ್ಮಾಣವಾಗಲಿರು ನರ್ಮದಾ ಸಾಗರ (ಇಂದಿರಾ ಸಾಗರ) 1.23 ಲಕ್ಷ ಹೆಕ್ಟೇರ್ ಭೂಮಿಗೆ ನೀರಾವ ಸೌಲಭ್ಯವನ್ನು ಮತ್ತು 223 ಮೆಗಾವಾಟ್ ವಿದ್ಯುತ್‌ಅನ್ನು ಒದಗಿಸಲಿದೆ. ಗು ರಾತ್‌ನ ಬರೂಚ್ ಜಿಲ್ಲೆಯ ಬಡ್‌ಗವ್ ಎಂಬಲ್ಲಿ ನಿರ್ಮಾಣವಾಗಲಿರುವ ಸರ್ದಾರ ಸರೋವರವು 18 ಲಕ್ಷ ಹೆಕ್ಟೇರ್ ಭೂಮಿಗೆ ನೀರುಣಿಸುವ ಮತ್ತು 300 ಮೆಗಾವಾಟ ವಿದ್ಯುತ್‌ಉತ್ಪಾದಿಸುವ ಗುರಿ ಹೊಂದಿದೆ. ಇದಲ್ಲದೆ ಈ ಯೋಜನೆಗಳು ನೆರೆ ನಿಯಂ ಸುವ ಮೀನುಗಾರಿಕೆ ಬೆಳೆಸುವ ನಗರಉದ್ಯಮಗಳಿಗೆ ನೀರುಪೂರೈಸುವ ಪ್ರವಾಸೋದ್ಯ ಬೆಳೆಸುವ, ಹಲವು ಇತರೆ ಗುರಿಗಳನ್ನು ಪಡೆದಿದೆ ವಿದ್ಯುತ್ ಉತ್ಪನ್ನದಿಂದ ನಿರೀ ಸಲಾದ ಆದಾಯ 13,000 ಕೋಟಿ, ಕೈಗಾರಿಕಾ ಉತ್ಪನ್ನ ರೂ 14 000ಕೋಟಿ ಅಧಿಕಗೊಳ್ಳುವ ಕೃಷಿ ಉತ್ಪನ್ನದ ಮೌಲ್ಯ ರೂ 1200 ಕೋಟಿ.

ನರ್ಮದಾ ಕಣಿವೆಯಲ್ಲಿ ಹರಿಯುವ ನೀರಿನ ಪ್ರಮಾಣ 28 ಎಮ್. ಎ. ಎಮ್ (ಮಿಲಿಯನ್ ಏಕರೆ ಮೀಟರ್)ಇದರಲ್ಲಿ ಈಗ ಬಳಸುತ್ತಿರುವುದು ಕೇವಲ 1.2 ಎಮ್ ಎ. ಎಮ್. ಉಳಿದ ನೀರೆಲ್ಲಾ ಅರಬಿಯನ್ ಸಮುದ್ರ ಸೇರುತ್ತಿದೆ. ನರ್ಮದಾ ಕಣಿವೆ ನೀರಾವರಿ ಯೋಜನೆಗಳ ಮೂಲಕ ಸಮುದ್ರ ಸೇರುವ ನೀರನ್ನು ಅಭಿವೃದ್ಧಿ ಗಾಗಿ ಬಳಸುವ ಉದ್ದೇಶ ಸರ್ಕಾರಕ್ಕಿದೆ. ಆದರೆ ಈಗ ಸಿದ್ಧವಾಗಿರುವ ನರ್ಮದಾ ಕಣಿವೆ ನೀರಾವರಿ ಯೋಜನೆ ನೀಲಿನಕ್ಷೆಯನ್ನು ಚಿಕಿತ್ಸಕ ದೃಷ್ಟಿಯಿಂದ ವಿಶ್ಲೇಷಿಸಿದಾಗ ತಿಳಿಯುವುದೇನೆಂದರೆ ಸೃಷ್ಟಿಯಾಗಲಿರುವ ಸಂಪತ್ತು ಕೇವಲ ಕಪೋಲ ಕಲ್ಪಿತಮತ್ತು ಉತ್ಪ್ರೇಕ್ಷೆಯಿಂದ ಕೂಡಿದೆ ಎಂಬುದಾಗಿದೆ.

## ತಬ್ಬಲಿಯಾಗುವ ಜನತೆ

ಈ ಯೋಜನೆಗಳಿಂದ ನೆಲ-ನೆಲೆ ಕಳೆದು ಕೊಂಡು ತಬ್ಬಲಿಯಾಗುವ ಜನರ ಒಟ್ಟಾರೆ ಸಂಖ್ಯೆ 10 ಲಕ್ಷ. ಸರ್ದಾರ್ ಸರೋವರವೊಂದೆ ಸುಮಾರು ಒಂದು ಲಕ್ಷ ಜನರನ್ನು ಸ್ಥಳಾಂತರಿಸಲಿದೆ. ಇಷ್ಟೊಂದು ಪ್ರಮಾಣದಲ್ಲಿ ಮುಳುಗಡೆಯಾಗಲಿರುವ ಪ್ರದೇಶದಿಂದ ಸ್ಥಳಾಂತರಗೊಳ್ಳುತ್ತಿರುವುದು ವಿಶ್ವದಲ್ಲೇ ಪ್ರಥಮ ಎನ್ನಲಾಗಿದೆ. ಈ ರೀತಿ ಸ್ಥಳಾಂತರಗೊಳ್ಳುತಿರುವ ಜನರಲ್ಲಿ ಬಹುಪಾಲು ಬುಡಕಟ್ಟು ಜನಾಂಗಕ್ಕೆ ಸೇರಿ ದವರಾಗಿದ್ದಾರೆ ಎಂಬುದು ಗಮನಾರ್ಹ. ಭೂಮಿ ಕಳೆದುಕೊಳ್ಳುವವರಿಗೆ ಬದಲಿ ಭೂಮಿಯ ರೂಪದಲ್ಲಿ ಪರಿಹಾರ ಕೊಡಬೇಕು ಎಂದು ಸರ್ಕಾರ ತೀರ್ಮಾನಿಸಿದೆ. ಆದರೆ ಭೂಮಿಕಳೆದುಕೊಳ್ಳುವ ಬುಡಕಟ್ಟು ಜನರ ಹತ್ತಿರ ತಮ್ಮ ಭೂಮಿಯ ಬಗ್ಗೆ ದಾಖಲೆಗಳಿರುವುದಿಲ್ಲ. ಅರಣ್ಯಜೀವಿಗಳಾದ ಮತ್ತು ಮಣ್ಣು, ಮರ, ಪ್ರಾಣಿಗಳೊಂದಿಗೆ ಅನ್ಯೋನ್ಯ ಸಂಬಂಧ ಇಟ್ಟುಕೊಂಡು ಬುಡಕಟ್ಟು ಜನತೆ ಪುನರ್ ವಸತಿಕೇಂದ್ರಗಳಲ್ಲಿ

ನೀರಿನಿಂದಎಸೆದ ಮೀನಿ'ನಂತಾಗುತ್ತಾರೆ. 'ನೆಲ-ನೆಲೆ' ಕಳೆದುಕೊಂಡು ತಬ್ಬಲಿಯಾಗುವ ಜನ ಅನುಭವಿಸುವ ಮಾನಸಿಕ ಮತ್ತು ಸಾಂಸ್ಕೃತಿಕ ವೇದನೆ (Culture Shock) ಕಲ್ಪಿಸಿ ಕೊಳ್ಳಲೂ ಸಾಧ್ಯವಿಲ್ಲ. ಇದೆಲ್ಲಕ್ಕಿಂತ ಹೆಚ್ಚಿಗೆ ಪುನರ್‌ವಸತಿ ಬಗ್ಗೆ ಸರ್ಕಾರದ ಈಹಿಂದಿನಸಾಧನೆ ಉತ್ತೇಜನಕಾರಿಯಾಗಿಲ್ಲ. ಪುನರ್ ವಸತಿ ಬಗ್ಗೆ ಸರ್ಕಾರ ನಡೆಸಿರುವ ಪೂರ್ವಸಿದ್ಧತೆ ಸಮಸ್ಯೆಯ ಗಂಭೀರತೆಗೆ ಹೋಲಿಸಿದರೆ ಏನೇನು ಸಾಲದು. "ನರ್ಮದಾ ಕಣಿವೆ ನೀರಾವರಿ ಯೋಜನೆ" ಸೃಷ್ಟಿಸುವ ನರಕದಿಂದ ಕ್ರೂರ ನೋವು-ಸಂಕಟ ಅನುಭವಿಸುವವರು ಈ 'ನೆಲ ನೆಲೆ' ಕಳೆದುಕೊಳ್ಳುವ ಜನತೆಯಾಗಿದ್ದಾರೆ.

## ಅರಣ್ಯ ನಾಶ

ನರ್ಮದಾ ಸಾಗರ ಯೋಜನೆಯು 40,332 ಹೆಕ್ಟೇರ್ ಮತ್ತು ಸರ್ದಾರ್ ಸರೋವರ ಯೋಜನೆಯು 13,744 ಹೆಕ್ಟೇರ್ ಅರಣ್ಯವನ್ನು ನಾಶಮಾಡಲಿವೆ. ಒಟ್ಟಾರೆ ನರ್ಮದಾ ಕಣಿವೆ ನೀರಾವರಿ ಯೋಜನೆ ಸೂರೆಗೊಳ್ಳಲಿರುವ ಅರಣ್ಯದ ವಿಸ್ತೀರ್ಣ 3.5 ಲಕ್ಷ ಹೆಕ್ಟೇರ್, ನೀರಾವರಿ ಯೋಜನೆಗಳಲ್ಲಿ ಮುಳುಗಡೆಯಾಗುವ ಪ್ರತಿಹೆಕ್ಟೇರ್ ಅರಣ್ಯಕ್ಕೆ ಬದಲಾಗಿ ಒಂದು ಹೆಕ್ಟೇರ್‌ನಷ್ಟು ಹೊಸ ಅರಣ್ಯವನ್ನು ಬೇರೆ ಸ್ಥಳದಲ್ಲಿ ಬೆಳೆಸಬೇಕು ಎಂಬ ನಿಯಮವಿದೆ. ಆದರೆ ಇದರ ಆಚರಣೆ ಮಾತ್ರ ಎಲ್ಲೂ ಗೋಚರ ವಾಗುತ್ತಿಲ್ಲ ರಾಷ್ಟ್ರಮಟ್ಟದಲ್ಲಿ ಅರಣ್ಯದ ವಿಸ್ತಾರ ಅವಶ್ಯಕತೆಗಿಂತ ಕಡಿಮೆ ಇದೆ. ಹೊಸ ಅರಣ್ಯ ಬೆಳೆಸುವ ಕಾರ್ಯ ಹೇಳಿದಷ್ಟು ಸುಲಭವೂ ಅಲ್ಲ ಮತ್ತು ಸಾಧ್ಯವೂ ಇಲ್ಲ ಇರುವ ಅರಣ್ಯವನ್ನೇ ರಕ್ಷಿಸಲಾರದವರು ಹೊಸ ಅರಣ್ಯವನ್ನೇನು ಸೃಷ್ಟಿಸಿ-ಯಾರು! ಅಪರೂಪದ ಮತ್ತು ಅಮೂಲ್ಯವಾದ ತಳಿ ನಿಕ್ಷೇಪವನ್ನು ಕಾಯ್ದಿಡುವ ವಾಯು ಮಾಲಿನ್ಯ ನಿಯಂತ್ರಿಸುವ, ಭೂಸವಕಳಿ ತಡೆಯುವ, ಎಲ್ಲಾ ಜೀವ ಸಂಕುಲಕ್ಕೆ ಆಶ್ರಯ ನೀಡಿರುವ ಈ ಪ್ರಾಕೃತಿಕ ಅರಣ್ಯಗಳು ನಾಶವಾದರೆ ಮತ್ತೆ ಸೃಷ್ಟಿಸಲು ಸಾಧ್ಯವಿಲ್ಲ. ಈ ಅರಣ್ಯ ಸೃಷ್ಟಿಸಿರುವ ಜೀವ ಸಂಕುಲ ವ್ಯವಸ್ಥೆ ಇಂದಿನ ಹಂತ ತಲುಪಲು ಸಾವಿರಾರು ವರ್ಷಗಳ ಕಾಲ ಹಿಡಿದಿದೆ. ಸರಾಸರಿ 50ವರ್ಷ ವಯಸ್ಸಿನ ಮರವೊಂದು ಸಮಾಜಕ್ಕೆ ನೀಡುವ ಕೊಡುಗೆಯ ಮೌಲ್ಯ ವಾರ್ಷಿಕ ರೂ 15ಲಕ್ಷ ಎಂದು ವಿಜ್ಞಾನಿಗಳು ಅಂದಾಜು ಮಾಡಿದ್ದಾರೆ. 50 ವರ್ಷ ವಯಸ್ಸಿನ ಮರವೊಂದನ್ನು ಕಡಿಯುವುದರಿಂದ ದೇಶಕ್ಕಾಗುವ ಹಾನಿ ರೂ. 15ಲಕ್ಷ 3.5 ಹೆಕ್ಟೇರ್ ಅರಣ್ಯನಾಶದಿಂದ ಸಂಭವಿಸುವ ಹಾನಿಯನ್ನು ಅಂದಾಜು ಮಾಡಲಾದೀತೆ? ನರ್ಮದಾ ಕಣಿವೆ ನೀರಾವರಿ ಯೋಜನೆ ಜಾಲದಲ್ಲಿ ಇರುವ ಸುಮಾರು 2 ಲಕ್ಷ ದನಗಳ ಹೊಟ್ಟೆಗೆ ಈ ಅರಣ್ಯ ನಾಶದಿಂದ ಮಣ್ಣು ಬೀಳುತ್ತದೆ.

## ನಾಶವಾಗಲಿರುವ ವನ್ಯಜೀವಿ ಮತ್ತು ಸಸ್ಯರಾಶಿ

'ನೆಲ-ನೆಲೆ' ಕಳೆದುಕೊಂಡು ತಬ್ಬಲಿಯಾಗುವ ಜನತೆಯ ಪುನರ್‌ವಸತಿ ಬಗ್ಗೆ ವ್ಯವಸ್ಥಿತ ಯೋಜನೆ ರೂಪಿಸಲಾರದ ಸರ್ಕಾರ ಮೂಕ ವನ್ಯಪ್ರಾಣಿ ಮತ್ತು

ಸಸ್ಯರಾಶಿ ರಕ್ಷಣೆಗೆ ಏನು ಮಾಡೀತು ಎಂಬುದನ್ನು ಯಾರೂ ಊಹಿಸಿಕೊಳ್ಳ ಬಹುದಾಗಿದೆ. ಮುಳುಗಡೆಯಾಗುವ ಪ್ರದೇಶದಿಂದ ಅಪಾಯಕ್ಕೀಡಾಗುವ ವನ್ಯಪ್ರಾಣಿಗಳು ಹೊಸ ಆಶ್ರಯ ಹುಡುಕಿಕೊಂಡು ವಲಸೆ ಹೋಗುತ್ತವೆ ಎಂಬುದು ನರ್ಮದಾ ಕಣಿವೆ ನೀರಾವರಿ ಯೋಜನೆ ಪ್ರಭೃತಿಗಳ ವಾದವಿರುವಂತಿದೆ. ದುರಂತವೆಂದರೆ ಈ ಕಣಿವೆಯು ಮುಳುಗಡೆ ಪ್ರದೇಶದಿಂದ ಹೊಸ ಆಶ್ರಯಕ್ಕೆ ಪ್ರಾಣಿಗಳು ವಲಸೆ ಹೋಗುವುದು ಸಾಧ್ಯವೇ ಇಲ್ಲ. ಸಹಸ್ರಾರು ವನ್ಯ ಜೀವಿಗಳು ಈ ಯೋಜನೆಗಳಿಂದ ಬಲಿಯಾಗುವುದು ಖಂಡಿತ. ನರ್ಮದಾ ಕಣಿವೆಯಲ್ಲಿರುವ ವನ್ಯ ಜೀವಿಗಳು ಮತ್ತು ಸಸ್ಯರಾಶಿಯು ಬಗ್ಗೆ ಸಮರ್ಪಕ ಸಮೀಕ್ಷೆ ಕಾರ್ಯವನ್ನು ಸರ್ಕಾರ ತಜ್ಞರಿಂದ ನಡೆಸಿಲ್ಲ. ಆದ್ದರಿಂದ ನಾಶವಾಗಲಿರುವ ವನ್ಯಜೀವಿ ಸಸ್ಯರಾಶಿಯ ಪ್ರಮಾಣ ವೈವಿಧ್ಯತೆ ಬಗ್ಗೆ ಏನೇನೂ ತಿಳಿಯಲಾರದು. ಇಂತಹ ಯೋಜನೆಗಳಿಗೆ ಅನುಮತಿ ಕೊಡಬೇಕಾದರೆ ಕೇಂದ್ರಸರ್ಕಾರ ಇಂತಹ ಸಮೀಕ್ಷೆ ಅಧ್ಯಯನಗಳ ನಂತರ ಪರಿಗಣಿಸಬೇಕು ಎಂಬ ನಿಯಮವಿದೆ. ಇಂತಹ ಸಮೀಕ್ಷೆ-ಅಧ್ಯಯನ ನಡೆಯದಿರುವ ನರ್ಮದಾ ಕಣಿವೆ ನೀರಾವರಿ ಯೋಜನೆಗಳಿಗೆ ಸರ್ಕಾರ ಅನುಮತಿ ನೀಡಿರುವುದು ಅತ್ಯಂತ ವಿಷಾದನೀಯ ವಿಚಾರವಾಗಿದೆ.

## ಫಲವತ್ತಾದ ಭೂಮಿನಾಶ

ಮೇಲೆ ತಿಳಿಸಿರುವ ನರ್ಮದಾ ಕಣಿವೆಯ ಎರಡು ಯೋಜನೆಗಳು ಕೂಡಿ ಈ ಕಣಿವೆಯು 56,000 ಹೆಕ್ಟೇರ್ ಕೃಷಿಯೋಗ್ಯ ಫಲವತ್ತಾದ ಭೂಮಿಯನ್ನು ಆಪೋಶನಗೊಳ್ಳಲಿವೆ. ಇದಲ್ಲದೆ ಕಾಲುವೆ, ವಸತಿ, ರಸ್ತೆ, ಮುಂತಾದವುಗಳಿಗೆ ಇನ್ನೂ ಹಲವಾರು ಸಾವಿರ ಹೆಕ್ಟೇರ್ ಭೂಮಿ ನಾಶವಾಗಲಿದೆ. ನೀರಾವರಿ ಅಚ್ಚುಕಟ್ಟಿನಲ್ಲಿನ ಭೂಮಿಯಿಂದ ಬೆಳೆಯುವ ಬೆಳೆಯ ಪ್ರಮಾಣ (ಹೆಕ್ಟೇರ್‌ವಾರು) ಕಾಯಂ ಆಪೋಶನಗೊಳ್ಳುವ ಫಲವತ್ತಾದ ಭೂಮಿಯಲ್ಲಿ ಬೆಳೆಯುವ ಬೆಳೆಯ ಪ್ರಮಾಣಕ್ಕೆ ಸಮವಾಗಲಾರದು. ಪರಿಸ್ಥಿತಿ ಹೀಗಿರುವಾಗ ಇಂತಹ ಯೋಜನೆಗಳ ಆವಶ್ಯಕತೆ ಏನಿದೆ ? ಅತಿಯಾದ ನೀರಾವರಿಯಿಂದ, ವರ್ಷಪೂರ್ತಿ ಸದಾಕಾಲ ನೀರುಹರಿಯುವುದರಿಂದ ಮತ್ತು ನೀರು ಸಂಗ್ರಹ ಹೆಚ್ಚುವುದರಿಂದ ಉಂಟಾಗುವ ಅಪಾಯಕರ ಪರಿಣಾಮಗಳನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ಇದರ ಒಂದು ಮುಖ್ಯ ಪರಿಣಾಮವೆಂದರೆ ಅಂತರ ಜಲದ ಮಟ್ಟ ಮೇಲೇರುತ್ತದೆ. ಇದರಿಂದಾಗಿ ಸವುಳು ಮತ್ತು ಜೌಗು ಭೂಮಿಯ ಸಮಸ್ಯೆ ಉದ್ಭವಿಸುತ್ತದೆ. ಈಗಾಗಲೇ ದೇಶದಿಂದ 30ರಿಂದ 35 ಮಿಲಿಯನ್ ಹೇಕ್ಟೇರ್ ಭೂಮಿ ಸವುಳು ಮತ್ತು ಜೌಗು ಸಮಸ್ಯೆಗೆ ತುತ್ತಾಗಿದೆ. ನರ್ಮದಾ ಕಣಿವೆಯ ಹೆಚ್ಚುಭಾಗ ಕಪ್ಪು ಮಣ್ಣಿನಿಂದ ಕೂಡಿದೆ. ಕಪ್ಪು ಮಣ್ಣಿಗೆ ತೇವಾಂಶ ಹಿಡಿದಿಟ್ಟುಕೊಳ್ಳುವ ಶಕ್ತಿ ಅಪಾರ. ಇಂತಹ ಭೂಮಿ ಅತಿ ನೀರಾವರಿಯಿಂದ ಸವುಳು ಮತ್ತು ಜೌಗು ಸಮಸ್ಯೆಗೆ ಸಿಲುಕುವುದು ಹೆಚ್ಚು.



# ಶಂಕರಾಚಾರ್ಯರು-ಬಸವಣ್ಣನವರು.

ಡಾ|| ಬಿ. ಎಸ್. ಸ್ವಾಮಿ, ವಿಜಯನಗರ, ಬೆಂಗಳೂರು-40.

ಶಂಕರಾಚಾರ್ಯರು 7ನೇ ಶತಮಾನದ 780-812)ಮಧ್ಯದಲ್ಲಿದ್ದವರು ಅದ್ವೈತ ಸ್ಥಾಪಕರು. ಅದ್ವೈತದ ಮೂಲ ಮಂತ್ರ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಬ್ರಹ್ಮವೊಂದೇ ಸತ್ಯ; ಜಗತ್ತು ಮಿಥ್ಯರೂಪವಾದದ್ದು ಜೀವನು ಬ್ರಹ್ಮನೇ, ಜೀವ ಬ್ರಹ್ಮನಿಂದ ಬೇರೆ ಅಲ್ಲ. ಈ ನಾಲ್ಕು ಸಿದ್ಧಾಂತಗಳೇ ಅದ್ವೈತದ ಸಾರ.

ಅದ್ವೈತ ಅತಿ ಪ್ರಾಚೀನ ಸಿದ್ಧಾಂತ. ಇದು ಉಪನಿಷತ್ತು ಸಂಹಿತೆಯ ಅನೇಕ ಸೂಕ್ತಗಳಲ್ಲಿ ಇದೆ. ಅದ್ವೈತವಾದ ವೈದಿಕ ಮಹರ್ಷಿಗಳು ಆಧ್ಯಾತ್ಮ ಜಗತ್ತಿಗೆ ಕೊಟ್ಟಿರುವ ಒಂದು ಮಹತ್ವಪೂರ್ಣ ಸಂಪ್ರದಾಯ. ಇದನ್ನು ಜಗತ್ತಿನ ಕಲ್ಯಾಣಕ್ಕೆ ಪ್ರತಿಪಾದಿಸಿದರು. ಇದು ವ್ಯವಹಾರಿಕ ಧರ್ಮ, ಪ್ರತಿಯೊಬ್ಬರೂ ಇದನ್ನು ತಿಳಿದು ನಿರ್ದೋಷವಾಗಿರಬಹುದು. ಪ್ರತಿಯೊಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಬೇಕು ಎಂಬುದೂ ಇದರ ಉದ್ದೇಶ.

ಶಂಕರಾಚಾರ್ಯರು ಮಹಾನ್ ವ್ಯಕ್ತಿ, ಉದಾತ್ತಚರಿತ್ರೆಯುಳ್ಳವರು. ಅಪ್ರತಿಮ ಪ್ರತಿಭೆ ಹೊಂದಿದ್ದವರು. ಆದರ್ಶಗುಣಗಳಿಂದ ಪರಿಪೂರ್ಣರಾಗಿದ್ದವರು. ಸರ್ವಜ್ಞತ್ವವನ್ನು ಪಡೆದಿದ್ದರು. ಮಾತೃ ಹಾಗೂ ಗುರುಗಳಲ್ಲಿ ಉತ್ಕಟವಾದ ಭಕ್ತಿ, ದೇವರಲ್ಲಿ ಅಪಾರ ಪ್ರೇಮ, ಭಕ್ತರಲ್ಲಿ ದಯೆ, ಶತ್ರುಗಳಲ್ಲಿ ಕ್ಷಮೆ, ಇವೇ ಮುಂತಾದ ಸದ್ಗುಣಗಳನ್ನು ಹೊಂದಿದ್ದರು. ಸನ್ಯಾಸತ್ವ ಸ್ವೀಕರಿಸುವಾಗಲೂ ತಾಯಿಯ ಅನುಮತಿ ಪಡೆದರು. ತಾಯಿಯ ಸಂಸ್ಕಾರದಲ್ಲಿ ಭಾಗವಹಿಸುತ್ತೇನೆಂದು. ತಾಯಿಯವರಿಗೆ ಕೊಟ್ಟ ಮಾತನ್ನು ಉಳಿಸಿಕೊಡರು. ಜಾತಿ ಬಾಂಧವರಿಂದ ತಿರಸ್ಕಾರ ಬಂದರೂಸನ್ಯಾಸಿಯಾ ದರೂ ತಾಯಿಯ ಚಿತೆಗೆ ಅಗ್ನಿ ಸ್ಪರ್ಶ ಮಾಡಿದರು. ಯಾರಿಗೂ ಸೊಪ್ಪು ಹಾಕಲಿಲ್ಲ ಅಪಾರ ಗುರು-ಭಕ್ತಿ. ಉಳ್ಳವರಾಗಿದ್ದರು. ರಾಜಶೇಖರನೆಂಬ ರಾಜನು ಒಮ್ಮೆ ಓದಿ ದ್ದ ನಾಟಕ ಸುಟ್ಟು ಹೋಗಿದೆ ಎಂದಾಗ ರಾಜನಿಗೆ ಹೇಳಿ ಬರೆಸಿದರು ಎಂದ ಮೇಲೆ ಅವರ ಜ್ಞಾಪಕ ಶಕ್ತಿ ಎಷ್ಟರ ಮಟ್ಟಿನದು ಎಂದು ಹೇಳಬೇಕಾಗಿಲ್ಲ.

ಅವೈದಿಕ ಮತ್ತು ವೈದಿಕ ಭಾಸ ಮತಗಳು ವೇದ ವಿರೋಧ ಸಿದ್ಧಾಂತವನ್ನು ಪ್ರಚಾರ ಮಾಡಿ ವೈದಿಕ ಧರ್ಮಕ್ಕೆ ಅಡ್ಡಿ ಮಾಡಿದ್ದರು. ಅದನ್ನು ಶಂಕರಾಚಾರ್ಯರು ಖಂಡಿಸಿ ಅದ್ವೈತ ಮತದ ಉದ್ಧಾರಕ್ಕೆ ಕಾರಣರಾದರು.

ವೈದಿಕ ಗ್ರಂಥಗಳ ಅಶ್ರದ್ಧೆ ಇದ್ದ ಕಾರಣ ಅವು ಕಠಿಣವಾಗಿದ್ದವು. ಉಪ
ತ್ತುಗಳ ರಹಸ್ಯ ಏನೆಂಬುದರ ಬಗ್ಗೆ ವಿದ್ವಾಂಸರಲ್ಲಿಯೇ ಏಕಾಭಿಪ್ರಾಯವಿಲ್ಲದುದ
ಸಾಮಾನ್ಯ ಜನರಿಗೆ ಅರ್ಥವಾಗುತ್ತಿರಲಿಲ್ಲ. ಅದಕ್ಕೆ ಭಾಷ್ಯಬರೆದು, ವ್ಯಾಖ್ಯಾನರ
ಅವುಗಳ ಗೂಢವಾದ ಅರ್ಥವನ್ನು ಸರಳವಾಗಿ ಸ್ಪಷ್ಟೀಕರಿಸಿದರು. ಇದನ್ನು ಸನ
ಗಳಿಗೆ ತಿಳಿಸಿ, ವೈದಿಕ ಧರ್ಮ ಪ್ರಸಾರಕ್ಕೆ ನೆರವಾದರು. ನಾಲ್ಕು ದಿಕ್ಕುಗ
ದ್ವಾರಕಾ, ಜಗನ್ನಾಥ, ಪುರೀ, ಬದರಿ, ರಾಮೇಶ್ವರ ಮೊದಲಾದೆಡೆ ಮಠಗಳ
ಮಾಡಿದರು.

ಶಂಕರಾಚಾರ್ಯರು ಶ್ರೇಷ್ಠ ಮಟ್ಟದ ದಾರ್ಶನಿಕರು. ಇವರದು ಗಂಭೀರ
ಪಾಂಡಿತ್ಯದ ಜೊತೆಗೆ ಕವಿತ್ವದ ಶಕ್ತಿ ಇತ್ತು. ಅವರು ಬರೆದ ಕವಿತೆಗಳು ರಸಭ
ದಿಂದ ಕೂಡಿದ್ದು ಆನಂದ ನೀಡುತ್ತವೆ ಓದುಗರಿಗೆ, ಬುದ್ಧಿಗೆ, ಆಹ್ಲಾದ ತುಂಬುತ್ತ
ಕಾವ್ಯಾನಂದ ದೊರೆಯುತ್ತದೆ. ನಾಲ್ಕನೇ ವಯಸ್ಸಿಗೆ ವೇದಾಧ್ಯಯನ ವ
ಹನ್ನೆರಡನೇ ವಯಸ್ಸಿನಲ್ಲಿ ಸಮಗ್ರ ಶಾಸ್ತ್ರಗಳ ಪಾಂಡಿತ್ಯ ಪಡೆದರು. ಹದಿನಾ
ವಯಸ್ಸಿನಲ್ಲಿ ಭಾಷ್ಯಗಳ ರಚನೆ ಮಾಡಿದರು. ಮೂವತ್ತೆರಡು ವರ್ಷ ಜೀವನ
ಲೋಕ ಖ್ಯಾತರಾದರು. ಸೃಷ್ಟಿಯನ್ನು ವ್ಯಾಪಿಸಿರುವ ಏಕತ್ವವನ್ನು ಕಂಡು ಎ
ಆತ್ಮಗಳ ಸಹಜ ಸ್ವರೂಪವೇ ಅದೆಂಬ ಅದ್ವೈತ ನಿಲುವನ್ನು ಸಾರಿ ಮಾನವನ ಏ
ಯನ್ನು ಎತ್ತಿಹಿಡಿದರು.

ಋಗ್ವೇದ ಪರಿಣತರಾದ ಪದ್ಮಪಾದರನ್ನು ಪೂರ್ವಕ್ಕೂ ಯಜುರ್ವೇದ ನಿ
ತರಾದ ಸುರೇಶ್ವರಾಚಾರ್ಯರನ್ನು ದಕ್ಷಿಣ ಶೃಂಗೇರಿಗೂ ಸಾಮವೇದಿಗಳಾದ ಹ
ಮಲಕರನ್ನು ಪಶ್ಚಿಮಕ್ಕೂ ಅಥರ್ವವೇದಿಗಳಾದ ತೋಂಟಕಾಚಾರ್ಯರನ್ನು ಉ
ಮಠಕ್ಕೂ ನೇಮಿಸಿದರು. (ಉತ್ತರಜ್ಯೋತಿ ಮಠ ದಕ್ಷಿಣ ಶೃಂಗೇರಿ ಮಠ ಪೂವ
ಗೋವರ್ಧನ ಪಶ್ಚಿಮ ಶಾರದಾ ಮಠ )

ಬಸವಣ್ಣನವರು ಸಮಾಜ ಸುಧಾರಕ, ಧರ್ಮ ಪ್ರಚಾರಕ, ವಚನಕಾ
ರಾಜಕೀಯ ವ್ಯಕ್ತಿ, ಅನುಭಾವಿ, ಕವಿ, ಜಗಜ್ಯೋತಿ ವಿಶ್ವಜ್ಯೋತಿ ಎಂದು ಕೋ
ಡಿಸಿಕೊಂಡವರು. ಅವರು ನಮ್ಮನ್ನಗಲಿ 800 ವರ್ಷಗಳಾಗಿದ್ದರೂ ಸದಾ ಅ
ಸಂದೇಶಗಳು, ವಚನ ಸಾಹಿತ್ಯ ಅವರನ್ನು ಜ್ಞಾಪಿಸುವುದು, ಎಚ್ಚರಿಸುವುದು. ಕನ
ಟಕದ ಧಾರ್ಮಿಕ ಪುರುಷರಲ್ಲಿ ಬಸವಣ್ಣನವರು ಅಗ್ರಗಣ್ಯರು. ಬ್ರಾಹ್ಮಣರ
ಹುಟ್ಟಿ ವೀರಶೈವ ಮತಾವಲಂಬಿಯಾಗಿ, ಜೀವನವನ್ನೇ ಸಮಾಜೋದ್ಧಾರಕ್ಕೆ ಮು
ಪಾಗಿಟ್ಟವರು. ಅವತಾರ ಪುರುಷ ಎಂದು ಹೊಗಳಿದರು. ಕವಿಗಳು ಪುರಾಣಗಳ
ರಚಿಸಿದರು.

ಸಿದ್ಧಗಂಗಾ

ವರ್ಗ, ವರ್ಣ, ಜಾತಿರಹಿತ ಸಮಾಜ ಸೃಷ್ಟಿಸಲು ಬಸವಣ್ಣನವರು ಕಾರಣರಾದರು. ಎಲ್ಲಾ ಜನರಿಗೂ ಸಮಾನ ಅವಕಾಶ, ಸಂಪತ್ತನ್ನು ವೃದ್ಧಿಗೊಳಿಸುವ ಕಾಯಕ, ಇವೇ ಆಧ್ಯಾತ್ಮ ಸಿದ್ಧಿಗೆ ನೆರವಾಗುವುದು ಎಂದು ಸಾರಿದರು. ಉತ್ಪತ್ತಿಯ ಜೊತೆಗೆ ಹಂಚಿಕೆಯೇ ದಾಸೋಹ ಎಂದರು. ಆಸ್ತಿ ಸಂಗ್ರಹದ ವಿರುದ್ಧ ಮಾಡಿದರು. ವ್ಯಕ್ತಿ ಸ್ವಾತಂತ್ರ ಪ್ರಜಾ ಪ್ರಭುತ್ವಕ್ಕೆ ಅನುಭವ ಮಂಟಪವೇ ಸಾಕ್ಷಿ. ಸರಳ ಜೀವನ ಮಾಡಬೇಕು, ದುಂದುವೆಚ್ಚ. ಮಾಡಬಾರದು ಎಂದು ಸಾರಿದರು.

ಬಸವಣ್ಣ ಧರ್ಮ ಬೋಧಕನಾಗಲಿಲ್ಲ, ವೈದಿಕ ಧರ್ಮದಲ್ಲಿ ನಡೆ-ನುಡಿಗಳಲ್ಲಿ ಅಂತರವಿತ್ತು, ಉಪನಿಷತ್ತುಗಳ ಮೇಲೆ ಭಾಷ್ಯಗಳು ಬಂದುವು. ಇವು ಬರೀ ಉಪದೇಶಕ್ಕೆ ಸೀಮಿತವಾದುವು. ಬಸವಣ್ಣನವರು ಪಂಡಿತ ಪ್ರತಿಪಾದಕರಾಗಲು ಇಷ್ಟಪಡಲಿಲ್ಲ.

"ಕೊಲ್ಲುವವ ಮಾದಿಗ ಹೊಲಸ ತಿಂಬವ ಹೊಲೆಯ
ಕುಲವೇನೋ ಆವಂದಿರ ಕುಲವೇನೋ
ಸಕಲ ಜೀವಾತ್ಮರಿಗೆ ಲೇಸ ಬಯಸುವ
ಕೂಡಲ ಸಂಗನ ಶರಣರೇ ಕುಲಜರು"

ಎಂದು ಹೇಳ ಅಸ್ಪೃಶ್ಯ ಹರಳಯ್ಯ, ಶಿವನಾಗಮಯ್ಯ. ಧೂಳಯ್ಯ ಮೊದಲಾದವರನ್ನು ಅನುಭವ ಮಂಟಪದಲ್ಲಿ ಕುಳ್ಳಿರಿಸಿದರು. ಬಸವಣ್ಣನವರು ಜಾತಿಯನ್ನು ಭಕ್ತ-ಭವಿ ಎಂದು ವಿಭಾಗ ಮಾಡಿದರು. 'ಶ್ವಪಚಿಯಾದರೇನು? ಶಿವಭಕ್ತನೇ ಕುಲಜ' ಕಕ್ಕಯ್ಯ ಪಡಿಹಾರಿ ಉತ್ತಣ್ಣ ಎಲ್ಲರೂ ಅನುಭವ ಮಂಟಪದಲ್ಲಿ ತಮ್ಮ ಅಭಿಪ್ರಾಯಗಳನು ವ್ಯಕ್ತಪಡಿಸುತ್ತಿದ್ದರು. ಪೌರೋಹಿತ ಶಾಹಿಯನ್ನು ಬದಲಿಸಬೇಕು ಯಜ್ಞಯಾಗಾದಿಗಳ ಹಿಂಸೆ ನಿಲ್ಲಿಸಬೇಕು ಎಂದು ಶೋಷಣೆಗಳನ್ನು ಪ್ರತಿಭಟಿಸಿದರು. ಡಾ॥ ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ 'ಕಾಯಕ-ದಾಸೋಹ' ಬಸವಣ್ಣನ ಪೂರ್ಣ ಜೀವನದ ಸಾಧನೆಯ ಎರಡು ಕಣ್ಣುಗಳು ಎಂದು ದಾಸೋಹವನ್ನು ಗುರು-ಲಿಂಗ-ಜಂಗಮಕ್ಕೆ ಅರ್ಪಿಸಬೇಕು ಸಂಪಾದಿಸಿದನ್ನು ದಾನ ಮಾಡಬೇಕೆಂದರು, ತಮಿಳು ನಾಡಿನ ಶೈವರು 63 ಪುರಾತನರು ಬಸವಣ್ಣನವರಿಗೆ ಆದರ್ಶರಾದರು. ಪ್ರಚೋದನೆಗೆ ಕಾರಣವಾದರು ಎಂದರೆ ತಪ್ಪಾಗಲಾರದು.

ಧರ್ಮ ಇಲ್ಲಿನ ಕರ್ತವ್ಯ ನಿರ್ವಹಿಸಲು ಪರಲೋಕದ ಸಾಧನೆಯಲ್ಲಿ ಧರ್ಮದ ಹೆಸರಿನಲ್ಲಿ ಈ ಲೋಕ ಮರೆಯಬಾರದು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ "ಇಲ್ಲಿ ಸಲ್ಲುವವರು ಅಲ್ಲೂ ಸಲ್ಲುವರಯ್ಯ" ದಯೆಯೇ ಧರ್ಮದ ಮೂಲವಯ್ಯಾ 'ಎಂದರು.

ಒಂದು ರೀತಿಯಲ್ಲಿ ಹೇಳುವುದಾದರೆ ಬಸವಣ್ಣನವರದು ಶರಣಧರ್ಮ. ಶರಣಧರ್ಮ ವಿವೇಚನೆಯಲ್ಲಿ ಆಧುನಿಕ ಮನೋಧರ್ಮಕ್ಕೆ ಅತ್ಯಂತ ಮೆಚ್ಚುಗೆಯ ಅಂಶ ಎಂದರೆ ವಿಚಾರ ಶೀಲತೆ. ಅಂಧ ಶ್ರದ್ಧೆಗೆ ಬೆಲೆಯಿಲ್ಲ. ತಮ್ಮ ಅನುಭವಕ್ಕೆ ಅರಿವಿಗೆ ಬಾರದುದನ್ನು ಅವರು ಒಪ್ಪಲಿಲ್ಲ. ಗುರು-ಲಿಂಗ-ಜಂಗಮ ತ್ರಿವಿಧದಾಸೋಹಕ್ಕೆ ಬೆಲೆ ಕೊಟ್ಟರು ಯಾವುದೇ ಗ್ರಂಥದಲ್ಲಿ ಹೇಳಿದೆ ಎಂದರೆ ಒಪ್ಪಬೇಕಾಗಿಲ್ಲ. ಕಾಲಕ್ಕೆ ತಕ್ಕಂತೆ ತೂಗಿ ನೋಡಬೇಕು ಅನುಭವಿಸಿ ನೋಡಬೇಕೆಂದರು.

ಬಸವಣ್ಣನವರು ವೇದ, ಶಾಸ್ತ್ರ, ಆಗಮಗಳ ನಿಂದಕರಲ್ಲ. ಅವುಗಳ ಹೆಸರಿಂದ ಬೆಳೆದು ಬಂದ ಅನೇಕ ಸಂಪ್ರದಾಯಗಳನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಆಚಾರ-ವಿಚಾರಗಳೆರಡಕ್ಕೂ ಬೆಲೆಕೊಟ್ಟರು. " ಇಂದ್ರಿಯನಿಗ್ರಹ ಮಾಡಿದರೆ ಹೊಂದುವುವು ದೋಷಗಳು " ಎನ್ನುತ್ತಾರೆ.

ಜಗದಲ್ಲಿ ಹುಟ್ಟಿ, ಬೆಳೆದು, ಜಗದಂತೆ ಇದ್ದೂ ಜಗವನ್ನು ಗೆದ್ದು ಹೋಗಬೇಕು. ಸಮಾಜ ಮತ್ತು ವ್ಯಕ್ತಿ ಎರಡೂ ಜೊತೆ ಜೊತೆಯಲ್ಲಿ ಬೆಳೆಯ ಬೇಕೆಂಬ ಪೂರ್ಣ ದೃಷ್ಟಿಯ ಮಾರ್ಗವನ್ನು ಸಾಧಿಸಿ ತೋರಲು ಸಮರ್ಥರಾದರು. ವ್ಯಕ್ತಿಯ ಉದ್ಧಾರವೇ ಸಮಾಜದ ಉದ್ಧಾರವೆಂದರು. ಈ ಶರಣ ಧಾರ್ಮಿಕ ಸಂದೇಶ ಆಧ್ಯಾತ್ಮಿಕ, ಲೌಕಿಕ ಜಗತ್ತುಗಳೆರಡನ್ನೂ ವ್ಯಾಪಿಸಿತು. ಮಾನವರೆಲ್ಲಾ ಸಮಾನರೆಂಬುದನ್ನು ಆಚರಣೆಗೆ ತಂದರು.

ಗೃಹಸ್ಥ ಜೀವನ ಆಧ್ಯಾತ್ಮ ಸಾಧನೆಗೆ ಅಡ್ಡಿ ಬರುತ್ತದೆಂದು ಸ್ತ್ರೀ ಮಾಯೆಯೆಂದು ತಿಳಿಯಲಿಲ್ಲ. ಸಂಸಾರದಲ್ಲಿದ್ದೂ ಸದ್ಗತಿಯನ್ನು ಪಡೆಯಬಹುದೆಂದು ಸಾಧಿಸಿದವರು ಬಸವಣ್ಣನವರು. ದೇವರನ್ನು ಒಲಿಸಿಕೊಳ್ಳಲು ಕಾಡಿಗೆ ಹೋಗಿ ಗುಹೆಸೇರಿ ತಪ ಮಾಡಿ ಶರೀರವನ್ನು ದಂಡಿಸಬೇಕಾಗಿಲ್ಲ. ತ್ಯಾಗಜೀವನ ಮಾಡಿ, ತನ್ನನ್ನು ತಾನು ಅರಿತು ಇಂದಿನ ವರ್ತಮಾನದ ಬದುಕನ್ನು ಅಚ್ಚುಕಟ್ಟಾಗಿ ರೂಪಿಸಿ ಕೊಳ್ಳಬಹುದು ಎಂದರು. ಶೋಷಣೆಯ ಕೇಂದ್ರವಾದ ದೇವಸ್ಥಾನವನ್ನು ಪ್ರತಿಭಟಿಸಿ ದೇಹವೇ ದೇಗುಲವೆಂದು ಇಷ್ಟಲಿಂಗಪೂಜೆ ಮಾಡುವುದನ್ನು ಬೋಧಿಸಿದರು ಕಳಬಾರದು, ನುಡಿದಂತೆ ನಡೆಯಬೇಕೆಂದು ಹಾಗೂ ತಾವು ನಿತ್ಯಜೀವನದಲ್ಲಿ ತೋರಿದರು "ಇವ- ನಾರವ ಇವನಾರವ ಎನಬೇಡ ಇವನಮ್ಮವ ಇವನಮ್ಮವ " ಎಂಬ ಭ್ರಾತೃತ್ವ ಇರ ಬೇಕೆಂದು ಸಾರಿದರು. ಸಕಲ ಜೀವಿಗಳಿಗೆ ಲೇಸಬಯಸುವ ಶರಣತತ್ವವನ್ನು ಪ್ರಚಾರ ಮಾಡಿದರು. ಮಾನವನ ಜೀವನವನ್ನು ಹಸನುಗೊಳಿಸುವಲ್ಲಿ ಶ್ರಮಿಸಿದರು. ಅಂತರ್ ಜಾತಿ ವಿವಾಹಮಾಡಿ ಜನಜಾಗೃತಿ ಮಾಡಿದರು. ದಿನನಿತ್ಯ ಕಂಡುಂಡ ಜೀವನಾನು ಭವಗಳಿಂದ ವಚನಸಾಹಿತ್ಯ ಸೃಷ್ಟಿಯಾಯಿತು. ಮಾನವನಿಂದ ದೇವಮಾನವ ಸ್ಥಾನಕ್ಕೆ ಏರಿದವರು ಬಸವಣ್ಣನವರು.

ಮುಂದುವರಿಯುತ್ತದೆ. ○



# ಬನ್ನಿ ಓ ಗೆಳೆಯರೇ ! ಸಿದ್ಧಗಂಗೆಗೆ ಬೇಗ



ಆಸ್ಥಾನ ವಿದ್ವಾನ್ ಡಾ|| ಬಸವರಾಜ ಶಾಸ್ತ್ರಿಗಳು, ಬೃಹನ್ಮಠ, ಬಳ್ಳಾರಿ-3.

ಬನ್ನಿ ಓ ಗೆಳೆಯರೇ ।
ಸಿದ್ಧಗಂಗೆಗೆ ಬೇಗ ।
ಸ್ವಾಗತವು ಸ್ವಾಗತವು ।
ಸರ್ವಜನ ಹಿತಕಾಗಿ ॥ ||೧||

ತಾತ್ವಿಕತೆ ತಾಂತ್ರಿಕತೆ ।
ವೈದ್ಯಕೀಯ ಶಿಕ್ಷಣಕೆ ।
ಸಂಸ್ಕೃತದ ಸಾಹಿತ್ಯಕೆ ।
ಕರ್ಮಯೋಗಿಯ ತಪೋಭೂಮಿಗೆ ||೨||

ಸಾಹಿತ್ಯನಂದನದಿ ।
ಕಾವ್ಯ ಕುಸುಮಗಳರಳಿ ।
ಪರಿಮಳಿಸುತಿವೆ ಬನ್ನಿ ।
ಬನ್ನಿ ಓ ಗೆಳೆಯರೇ ॥ ||೩||

ಒಂದು ಮಲ್ಲಿಗೆಯಂತೆ ।
ಮುಗ ಮುಗಿಸುತಿದೆ ನೋಡಿ ।
ಮತ್ತೊಂದು ಸಂಪಿಗೆಯು ।
ಸೊಂಪು ಬೀರುತಲಿಹುದು ॥ ||೪||

ಮುಗದೊಂದು ಕಮಲಾಗಿ ।
ಕಂಪು ಪಸರಿಸುತಲಿದೆ ।
ಮರಿದುಂಬಿ ನೀವಾಗಿ ।
ರಸವನೀಂಟಲು ಬನ್ನಿ ॥ ||೫||

ಜೀವನದ ಸಂಗೀತ ।
ನಾದದಲಿ ನೀವ್ ಹಾಡಿ ।
ಝೇಂಕರಿಸೆ ಹೃದಯತಂತಿ ।
ಮೀಟಿ ಹಾಡಲು ಬನ್ನಿ॥ ||೬||

ಸಾಹಿತ್ಯವಾರಿಧಿ ಮಥಿಸಿ ।
ರಸದಮೃತ ಕುಡಿಯೆ ।
ಕಷ್ಟ ಕಾರ್ಪಣ್ಯಗಳ j
ಕಾಲಕೂಟವ ಕಳೆಯೆ ॥ ||೭||

ಜಗದ ಜಂಜಡ ನೀಗಿ ।
ಮಿಗಿಲಾದ ಸೊಗಪಡೆಯೆ ।
ಬಗೆ ಬಗೆಯ ಅನುಭವದಿ ।
ನಗಿಸಿ ನೀತಿಯ ಕಲಿಯೆ ॥ ||೮||

ಅಜ್ಞಾನ ನಿಶೆ ಕಳೆದು ।
ಸುಜ್ಞಾನ ಪ್ರಭೆ ಬೆಳೆದು ।
ಪ್ರಜ್ಞಾನ ಶಿವನರಿಯೆ ।
ಸುಜ್ಞಾನ ದೀಪಕ್ಕೆ ॥ ||೯||

ಅಷ್ಟಮದಗಳು ಅಳಿಯೆ ।
ನಿಷ್ಠೆ ಶಿವನಲಿ ಬೆಳೆಯೆ ।
ಕಷ್ಟವೆಲ್ಲವು ಕಳಿಯೆ ।
ಇಷ್ಟಾರ್ಥವನು ಪಡೆಯೆ ॥ ||೧೦||

# ಓ ಕವಿ ಈ ನಿರಾಶೆಯ ಪೆಟ್ಟು

—ನಂದಕಿಶೋರ.

ಓ ಕವಿ! ಈ ನಿರಾಶೆಯ ಪೆಟ್ಟು ಬಹು ಆಳವಾಗಿ ನಿನ್ನ ಹೃದಯವನ್ನು ತಾಕಿತೆ! ನಿನ್ನ ನಿಟ್ಟುಸಿರು, ಅನುಕಂಪ, ಉದ್ವೇಗ, ಆತುರ ಕಾತರ ಕಳವಳಗಳಿಗಿಂತ ಆಳವಾಗಿ ನರನಾಡಿಗಳು ಕಂಪಿಸಿ ಕುಸಿದುವೇ! ರಕ್ತಕಣಧನಿ ಈ ದುಃಖದ ಆವೇಗಕ್ಕೆ ಸೋತು ಸ್ರವಿಸಿತು. ಹಸಿಹಸಿಯಾಗಿ ರಕ್ತ ನೀಜಾತ ದುಃಖದಂತೆ ಮರಣಪ್ರಾಯ ನೋವಿನಂತೆ ಮೆಲ್ಲ.......... ...ಕವಿ ನಿನ್ನ ಸಂಕಟ ನೋವು ಯಾವದೆಂದು ಯಾರೂ ಮರುಗುವುದಿಲ್ಲ.......... . ಗಿಡ ಮರಗಳು ನೀನು ಭಾವಿಸುವಂತೆ ಕಣ್ಣೀರಿಡುವುದಿಲ್ಲ. ........ಗಾಳಿ ಕಂಪಿಸುವುದಿಲ್ಲ. ಯಾವ ನರಲೋಕದ ಎದೆಯು ಸಂಪೆರೆದು ಬಿಸುಸುಯ್ದು ನಿಲ್ಲಿಸಿ ತನ್ನ ಹಗುರಮಾಡಲು, ಲೋಕದ ಮನುಷ್ಯನ ಕಣ್ಣಿನ ಗುಳಿಯಲ್ಲಿ ಒಂದೆರಡು ಸಹಾನುಭಾವಿ ಪೂರ್ವಕ ಅಶ್ರುಗಳ ಸಂಚಿತವಾಗುವುದಿಲ್ಲ. ಜಗತ್ತಿನ ವಕ್ಷಸ್ಥಲದಲ್ಲಿ ತಿಲಮಾತ್ರ ಕರುಣಾರಸದ ಸಣ್ಣ ಬಿಂದು ಸ್ರವಿಸಿ ಹನಿಗೂಡುವುದಿಲ್ಲ.......ಏಕೆ ಗೊತ್ತೆ .......ಹನಿಯೆಂದರೆ ಅನಂತಯಾತನೆಯಲ್ಲಿ ಜಲಸ್ರೋತದ ಅಪೂರ್ವ ಅನುಭವವಡಗಿದೆ ಗಿಡವೊಂದರ ಗರ್ಭಧಾರಣೆಯನೋವಿನಲ್ಲಿ ಪುಷ್ಪಸೌರಭದ ಅಪೂರ್ವ ಪರಿಮಳವಿದೆ ನಿನ್ನ ನರನಾಡಿ ಕುಸಿದು ರಕ್ತದ ಹನಿ ಸುರಿವಾಗ ನಟ್ಟ ಅಪೂರ್ವ ಅನುಭವದ ಬೀಜವೊಂದು ಜೀವರಸವೀಂಟಿ ಮೆಲ್ಲನೆ ಪುಟಿದೆದ್ದು ಚಿಗಿತು ವಿಶ್ವವಿಶಾಲವಾದ ಮನಸ್ಸಿನ ಬಯಲಿನ ಮೇಲೆ ಹಣಕಣಕುತ್ತದೆ. ಆ ಪುಟ್ಟಗಿಡದಲ್ಲಿ ಒಂದು ನಂದನವನದ ಸುರಸುಂದರ ಕುಮ ಮಂದಾರವರಳಿ ಜಗತ್ತಿಗೆ ತನ್ನ ಅಪೂರ್ವವಾದ ಸೌರಭವನ್ನು ಸೂಸುತ್ತದೆ. ಕವಿ ನಿನ್ನ ಹಿಂಸೆ ಯೋಚನೆಗಳ ಆ ಸ್ಮಶಾನದಲ್ಲಿ ನವ ಸೃಷ್ಟಿಯು ವಿಶ್ವ ತಾಂಡವನಲಿದು ಹೊಚ್ಚ ಹೊಸ ಚೇತನವೇಳುತ್ತದೆ....... ಅವುದೋ ಒಂದು ಅಪೂರ್ವ ತತ್ವ ಸಂಗ್ರಹಕ್ಕಾಗಿ ಕಲೆಯ ಕಾಣಿಕೆಗಾಗಿ ನಿನ್ನ ಯೋಚನೆಯನ್ನು ನಿಷ್ಕರುಣ, ನಿರ್ದಯವಾಗಿ ನೀರವವಾಗಿ ಸೃಷ್ಟಿ ನಿರೀಕ್ಷಿಸದೆ ಗತ್ಯಂತರವಿಲ್ಲ........ಲೋಕ ನಗಬೇಕಾದರೆ ಆರಾದರೂ ಅಳಬೇಕೆಂಬುದೊಂದು ಕವಿ-ನಿಜವಾಗಿಯೂ ಸತ್ಯದಒಂದು ಪ್ರಖರಕಿರಣ.

---

ಏನಾನುಮಂ ಮಾಡು ಕೈಗೆ ದೊರೆತುಜ್ಜುಗವ ।
ನಾನೇನು ಹುಲುಕಡ್ಡಿಯೆಂಬ ನುಡಿಬೇಡ ।
ಹೀನವಾವುದುಮಿಲ್ಲ ಜಗದ ಗುಡಿಯೂಳಿಗದಿ ।
ತಾಣ ನಿನಗಿಹುದಲ್ಲಿ–ಮಂಕುತಿಮ್ಮ ॥

—ಡಿ. ವಿ. ಜಿ.

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
**ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ**

## " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :

4 ಕೋಟಿ ರೂಗಳ ವೆಚ್ಚದಲ್ಲಿ
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
ಮತ್ತು
**ಬೃಹತ್ ಪ್ರಸಾದ ನಿಲಯ.**

ಭಾರತದ ಉಪರಾಷ್ಟ್ರಪತಿ ಡಾ|| **ಶ್ರೀ ಶಂಕರದಯಾಳ ಶರ್ಮ** ಮತ್ತು ಲೋಕಸಭಾಧ್ಯಕ್ಷ **ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು (16-2-92) ನೆರವೇರಿಸಿದ್ದಾರೆ.

**5/–, 10/–, 25/-, 51/-, 101/–, 201/-, 501/–, 1001/ 5001/-, 10,001/–, 35,000** ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,
ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

ಪದ್ಮಭೂಷಣ ಡಾ|| ಎಂ. ಸಿ. ಮೋದಿ,
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ.
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 101.